ಶ್ರೀ ರಾಘವಚೈತನ್ಯವಿರಚಿತಂ

# ಮಹಾಗಣಪತಿಸ್ತೋತ್ರಮ್



ಅನುವಾದಕರು : ಶೇಷಾಚಲಶರ್ಮಾ

॥ ಶ್ರೀ ಮಹಾಗಣಪತಯೇ ನಮಃ ॥

# ಪ್ರಕಾಶಕರ ನುಡಿ

ಶ್ರೀ ಮಹಾಗಣಪತಿಯ ಸ್ವರೂಪ, ಮಂತ್ರ ಮತ್ತು ಯಂತ್ರಗಳ ವಿಚಾರವನ್ನು ಒಳಗೊಂಡಿರುವ ಒಂದು ಚಿಕ್ಕ ಸುಂದರ ಗಂಭೀರವಾದ ಈ ಸ್ತೋತ್ರವು ಶ್ರೀ ರಾಘವ ಚೈತನ್ಯರೆಂಬ ಯತಿಗಳಿಂದ ರಚಿತವಾದುದು. ಇದರ ಪಠನ, ಪಾರಾಯಣ ಇಲ್ಲ ಶ್ರವಣದಿಂದ ಗಜವದನನ ಸಚ್ಚಿದಾನಂದ ಲಕ್ಷಣವು ಸಾಧಕರ ಅಂತರಂಗದಲ್ಲಿ ಸ್ಪಂದಿಸುವುದು ಸತ್ಯ. ಮಾತೃಕಾ ವರ್ಣಗಳು ಸೂಚಿಸುವ ಸಂಖ್ಯೆಗಳನ್ನು ಕೂಡಿದರೆ "ಮಹಾಗಣಪತಿ"ಯ ನಾಮಕ್ಕೆ 28–ಎಂಬ ಸಂಖ್ಯೆಯು ಸಿದ್ಧಿಸುವುದು. ಶ್ರೀ ಮಹಾಗಣಪತಿಯ 28 ಅಕ್ಷರಗಳ ದಿವ್ಯಮಂತ್ರವು ಈ ಕೃತಿಯ ಎರಡನೆಯ ಪದ್ಯದಲ್ಲಿ ನಿರೂಪಿತವಾಗಿದೆ. ಗಣಪತಿಯ ವಿಷಯವಾಗಿ ಕೃತಿಗಳಿಗೆ ಕೊರತೆ ಇಲ್ಲ. ಆದರೂ ಒಂದು ನಿಶ್ಚಿತ ಕ್ರಮದಲ್ಲಿ ಆ ದೇವನ ಮಂತ್ರ, ಯಂತ್ರ ಮತ್ತು ಸ್ವರೂಪಗಳನ್ನು ನಿರೂಪಿಸುವಂತಹ ಸ್ತೋತ್ರಗಳು ವಿರಳ. ಅಂತರಂಗದಲ್ಲಿ ಸ್ತೋತ್ರ ಮಾಡಲು ಈ ಸ್ತೋತ್ರವು ಉಪಯುಕ್ತವೆಂದು ತಿಳಿದು ಇದರ ಪ್ರಕಾಶವನ್ನು ಮಾಡಿರುತ್ತೇವೆ. ಈ ಸ್ತೋತ್ರವನ್ನು ಸರಳಸುಂದರವಾಗಿ ಕನ್ನಡೀಕರಿಸಿರುವವರು ನಮ್ಮ ವಿದ್ಯಾಗುರುಗಳಾದ ವಿದ್ವಾನ್ ಶ್ರೀ ಶೇಷಾಚಲಶರ್ಮರು. ಅವರು ಈಗಾಗಲೇ ಅನುವಾದ ಮಾಡಿರುವ ಮೂಕಕವಿವಿರಚಿತ ಆರ್ಯಾಶತಕವೆಂಬ ಶ್ರೀ ಕಾಮಾಕ್ಷೀ ಸ್ತೋತ್ರವು

ಎಲ್ಲರ ಮೆಚ್ಚುಗೆ ಪಡೆದಿದೆ. ಹಲವಾರು ಉಪಾಸನಾರಹಸ್ಯಗಳಿಂದ ತುಂಬಿರುವ ಶ್ರೀ ಮಹಾಗಣಪತಿಯ ಸ್ತೋತ್ರವನ್ನು ಸಾಮಾನ್ಯರಿಗೂ ಸಾಧನೋಪಾಯವಾಗುವಂತೆ ಅನುವಾದಮಾಡಿ ಅವರು ಶ್ರೀ ಗಣೇಶನ ಭಕ್ತವೃಂದಕ್ಕೆ ಮಹದುಪಕಾರ ಮಾಡಿರುವರು. ಈ ಸರಳ ಶ್ರೇಷ್ಠ ವಿದ್ವಾಂಸರಿಗೆ ನಮ್ಮ ನಮ್ರ ಕೃತಜ್ಞತೆಗಳು.

ಶ್ರೀ ಮಹಾಗಣಪತಿಯ ಮುಗ್ಧ ರೇಖಾಚಿತ್ರವನ್ನು ಬರೆದುಕೊಟ್ಟಿರುವ ಶ್ರೀಮತೀ ಜಯಶ್ರೀರವರಿಗೆ ನಮ್ಮ ಧನ್ಯವಾದಗಳು. ಹಾಗೆಯೇ ಈ ಪ್ರಕಟಣೆಯಲ್ಲಿ ಅತ್ಯಂತ ಆದರ ತೋರಿಸಿ ಸುಂದರವಾಗಿ ಮುದ್ರಣಮಾಡಿ ಕೊಟ್ಟಿರುವ ಪಯೋನಿಧಿ ಪ್ರಿಂಟರ್ಸ್ ಮಾಲೀಕರಾದ ಶ್ರೀ ಹೆಚ್. ವೆಂಕಟರಾಮಯ್ಯನವರಿಗೆ ನಮ್ಮ ಕೃತಜ್ಞತೆಗಳು.

"ಗಣೇಶೇ ವಿಭೌ ದುರ್ಲಭಂ ಕಿಂ ಪ್ರಸನ್ನೇ"—ಪ್ರಭುವಾದ ಶ್ರೀ ಗಣೇಶನು ಪ್ರಸನ್ನನಾಗಿರುವಾಗ ಯಾವುದು ತಾನೇ ದುರ್ಲಭವು ಎಂಬ ಶ್ರೀ ಶಂಕರಭಗವತ್ಪಾದರ ನುಡಿಯಂತೆ ಶ್ರೀಮಹಾಗಣಪತಿಯನ್ನು ಈ ಸ್ತೋತ್ರಾನುಸಂಧಾನದಿಂದ ಒಲಿಸಿಕೊಂಡು ಎಲ್ಲರೂ ತಮ್ಮ ತಮ್ಮ ಇಷ್ಟಾರ್ಥಗಳನ್ನು ಪಡೆದುಕೊಳ್ಳುವಂತಾಗಲಿ ಎಂದು ಆಶಿಸುತ್ತೇವೆ.

ಇತಿ

**ಸದ್ವಿದ್ಯಾ ಪ್ರಕಾಶನ**

# ಮುನ್ನುಡಿ

ಶ್ರೀ ಸದ್ಗುರವೇ ನಮಃ । ಶ್ರೀ ಮಹಾಗಣಪತಯೇ ನಮಃ ।

ಶ್ರುತಿಪ್ರತಿಪಾದ್ಯನಾದ ಬ್ರಹ್ಮಣಸ್ಪತಿಯೇ ಭಗವಾನ್ ಗಣಪತಿ. ವೇದದ ಅರ್ಥವನ್ನು ವಿಶದೀಕರಿಸುವುದಕ್ಕಾಗಿಯೇ ಪುರಾಣವಾಙ್ಮಯವು ಮಹರ್ಷಿಗಳಿಂದ ಪ್ರೋಕ್ತವಾಗಿದೆ. ಸಮಸ್ತ ವಾಙ್ಮಯಕ್ಕೂ ಅಧಿಷ್ಠಾತೃವಾದ ಪರಮಾತ್ಮ ಬ್ರಹ್ಮಣಸ್ಪತಿಯು ಪುರಾಣಸಾಹಿತ್ಯದಲ್ಲಿ ಗಣೇಶ, ಗಣಪತಿ, ವಿಘ್ನೇಶ, ವಿನಾಯಕ ಎಂದು ಮುಂತಾಗಿ ವರ್ಣಿತನಾಗಿದ್ದಾನೆ. ಗಣಪತಿಯ ತಾತ್ತ್ವಿಕ ಸ್ವರೂಪವನ್ನು ಕುರಿತು ಹೇಳುವುದಾದರೆ ಅವನೇ ಸಚ್ಚಿದಾನಂದ ಸ್ವರೂಪವಾದ ಪರಬ್ರಹ್ಮ. ಆದ್ದರಿಂದಲೇ ವಿಶ್ವವ್ಯಾಪಕವಾದ ವಿಭೂತಿವೈಭವದಿಂದ ಬೆಳಗುವ ಸರ್ವಪೂಜ್ಯನಾದ ದೇವಾಧಿದೇವ. ಸಿದ್ಧಿ–ಬುದ್ಧಿಗಳಿಗೆ ಒಡೆಯನೂ ಸಮಸ್ತ ಮಂಗಳಗಳಿಗೆ ಈಶನೂ ಆದ ಈ ದೇವನನ್ನು ಪರಮಶಿವನೂ ಕೂಡ ವಂದಿಸುವ ಪ್ರಸಂಗ ಮುದ್ಗಲ ಪುರಾಣದಲ್ಲಿ ಉಕ್ತವಾಗಿದೆ.

"ಸಿದ್ಧಿಬುದ್ಧಿಪತಿಂ ವಂದೇ ಬ್ರಹ್ಮಣಸ್ಪತಿಸಂಜ್ಞಿತಮ್ ।
ಮಾಂಗಲ್ಯೇಶಂ ಸರ್ವಪೂಜ್ಯಂ ವಿಘ್ನಾನಾಂ ನಾಯಕಂಪರಮ್ ॥"

ಗಣಪತ್ಯಥರ್ವಶೀರ್ಷೋಪನಿಷತ್ತಿನಲ್ಲಿ ಈ ದೇವನ ಸ್ವರೂಪ ಮಹಿಮೆಯು ಹೀಗೆ ವರ್ಣಿತವಾಗಿದೆ:—

ಓಂ ನಮಸ್ತೇ ಗಣಪತಯೇ । ತ್ವಮೇವ ಪ್ರತ್ಯಕ್ಷಂ ತತ್ತ್ವಮಸಿ ।
ತ್ವಮೇವ ಕೇವಲಂ ಕರ್ತಾಸಿ । ತ್ವಮೇವ ಕೇವಲಂ ಧರ್ತಾಸಿ ।
ತ್ವಮೇವ ಕೇವಲಂ ಹರ್ತಾಸಿ [ ತ್ವಮೇವ ಸರ್ವಂ ಖಿಲ್ವಿದಂ
ಬ್ರಹ್ಮಾಸಿ । ತ್ವಂ ಸಾಕ್ಷಾದಾತ್ಮಾಸಿ ನಿತ್ಯಮ್ .................. ।

ತ್ವಾಂ ಯೋಗಿನೋಧ್ಯಾಯಂತಿ ನಿತ್ಯಮ್ । ತ್ವಂ ಬ್ರಹ್ಮಾತ್ವಂ ವಿಷ್ಣುಸ್ತ್ವಂ
ರುದ್ರಸ್ತ್ವಮಿಂದ್ರಸ್ತ್ವಮಗ್ನಿಸ್ತ್ವಂ ವಾಯುಸ್ತ್ವಂ ಸೂರ್ಯಸ್ತ್ವಂ
ಚಂದ್ರಮಾಸ್ತ್ವಂ ಬ್ರಹ್ಮ ಭೂರ್ಭುವಸ್ಸುವರೋಮ್ ॥"

ಯೋಗಿಶ್ರೇಷ್ಠರೂ ಜ್ಞಾನಿವರೇಣ್ಯರೂ ಆದ ಶ್ರೀಶಂಕರಭಗವತ್ಪಾದರು ಈ ದೇವನನ್ನು "ಹೃದಂತರೇ ನಿರಂತರಂ ವಸಂತಮೇವ ಯೋಗಿನಾಮ್" (ಈ ದೇವನು ಸದಾ ಯೋಗಿಗಳ ಹೃದಯದಲ್ಲಿ ವಾಸಿಸುವನು) ಎಂದು ಸ್ತುತಿಸಿದ್ದಾರೆ. ಗಣೇಶನು ಭುಕ್ತಿ–ಮುಕ್ತಿಗಳೆರಡನ್ನೂ ನೀಡುವ ಸರ್ವಶಕ್ತನಾದ ದೇವನು. ಸಕಲಶುಭ ಕರ್ಮಗಳೂ ನಿರ್ವಿಘ್ನವಾಗಿ ನೆರವೇರುವುದಕ್ಕೋಸ್ಕರ ಆದಿಯಲ್ಲಿ ಪೂಜ್ಯನಾಗುವವನು ಶ್ರೀ ಗಣೇಶನೇ. ಇತರ ದೇವತೆಗಳನ್ನು ಪೂಜಿಸುವಾಗಲೂ ಪ್ರಥಮ ಪೂಜ್ಯನಾದ ಪ್ರಮಥ ಪತಿಯು ಇವನೇ. ಈ ದೇವನ ಸ್ವರೂಪ ಮಹಿಮೆಗಳನ್ನು ತಿಳಿಸುವ ಹನ್ನೆರಡು ನಾಮಗಳನ್ನು ಸಮಸ್ತ ಕರ್ಮಗಳ ಆದಿಯಲ್ಲಿ ಕೀರ್ತಿಸುವುದು ಆರ್ಷ-ಸಂಪ್ರದಾಯದಿಂದ ಬಂದಿದೆ.

ಸುಮುಖಶ್ಚೈಕದಂತಶ್ಚ ಕಪಿಲೋಗಜಕರ್ಣಕಃ ।
ಲಂಬೋದರಶ್ಚ ವಿಕಟೋ ವಿಘ್ನರಾಜೋ ಗಣಾಧಿಪಃ ॥
ಧೂಮ್ರಕೇತುರ್ಗಣಾಧ್ಯಕ್ಷೋಭಾಲಚಂದ್ರೋಗಜಾನನಃ ।
ದ್ವಾದಶೈತಾನಿ ನಾಮಾನಿಯಃ ಪಠೇಚ್ಛೃಣುಯಾದಪಿ ॥
ವಿದ್ಯಾರಂಭೇವಿವಾಹೇಚ ಪ್ರವೇಶೇನಿರ್ಗಮೇತಥಾ ॥
ಸಂಗ್ರಾಮೇ ಸರ್ವಕಾರ್ಯೇಷು ವಿಘ್ನಸ್ತಸ್ಯನಜಾಯತೇ ॥"

ಪಂಚಾಯತನ ಪೂಜೆಯಲ್ಲಿ ಗಣೇಶನಿಗೆ ವಿಶೇಷವಾದ ಮಹತ್ತ್ವವಿದೆ. ಪಂಚಭೂತಾತ್ಮಕವಾದ ಈ ಜಗತ್ತಿನ ಮೂಲಶಕ್ತಿಗಳ ಪ್ರಸನ್ನತೆಗಾಗಿ ಪಂಚಾಯತನ ಪೂಜೆಯು ಅತ್ಯಂತ ತಾತ್ತ್ವಿಕವಾಗಿದೆ. ಆದಿತ್ಯ, ಗಣೇಶ, ಅಂಬಿಕೆ, ವಿಷ್ಣು, ಶಿವ—ಇವರೇ ಪಂಚಾಯತನಕ್ಕೆ ಸೇರಿದ ಐದುಮಂದಿ ದೇವರುಗಳು. ಮಧ್ಯದಲ್ಲಿ ಇವರ ಪೈಕಿ ಒಬ್ಬ ಇಷ್ಟದೇವನನ್ನು ಭಾವಿಸಿ ನಾಲ್ಕು ದಿಕ್ಕುಗಳಲ್ಲೂ ಉಳಿದ ನಾಲ್ವರು ದೇವತೆಗಳನ್ನು ಉಪಾಸನೆ ಮಾಡುವ ಪದ್ಧತಿಯಿದೆ. ಎಲ್ಲ ಪ್ರಕಾರಗಳ ಪೂಜೆಗಳಲ್ಲೂ ಆದಿಯಲ್ಲಿ ಗಣೇಶನಿಗೆ ಪೂಜೆ ಸಲ್ಲಿಸಲೇ ಬೇಕು. ದೇಹದಲ್ಲಿ ಮೂಲಾಧಾರ ಚಕ್ರದಲ್ಲಿ ಬೆಳಗುವ ದೇವನು ಶ್ರೀ ಗಣೇಶನು. ಮೂಲಾಧಾರ ಚಕ್ರದಲ್ಲಿ ಬೆಳಗುವ 21 ದಿವ್ಯಶಕ್ತಿಗಳಲ್ಲಿ ಈ ದೇವನು ಶ್ರೀ ಗಣೇಶನಾಗಿಯೋ ಅಥವಾ ವಿಷ್ವಕ್ಸೇನನಾಗಿಯೋ ಪೂಜಿತನಾಗುತ್ತಾನೆ. ಶ್ರೀ ಗಣೇಶ ಹಾಗೂ ವಿಷ್ವಕ್ಸೇನನನ್ನು ಭಾವಿಸುವ ಧ್ಯಾನಶ್ಲೋಕವು ಒಂದೇ ಆಗಿರುವುದು ದೇವತೆಯ ಪರಮಾರ್ಥತತ್ತ್ವದ ಕಡೆಗೆ ಉಪಾಸಕರ ದೃಷ್ಟಿಯನ್ನು ತೆರೆಸುತ್ತದೆ. ಶ್ರೀ ಗಣೇಶನು ವರಸಿದ್ಧಿವಿನಾಯಕನಾಗಿ ಪೂಜಿತನಾಗುವಾಗ ಸಕಲ ಫಲ–ಪುಷ್ಪ–ಪತ್ರಗಳೂ ಇವನಿಗೆ

ಅರ್ಪಿತವಾಗುತ್ತವೆ. ವಿಶೇಷವಾಗಿ ದೂರ್ವೆಯ (ಗರಿಕೆಹುಲ್ಲು) ದರ್ಶನ, ಸ್ಪರ್ಶನ, ಸೇವನೆಗಳಿಂದ ಮೂಲಾಧಾರಚಕ್ರದ ಪರಿಶುದ್ಧಿಯು ಪ್ರಾಪ್ತವಾಗಿ ದೇವತೋ-ಪಾಸನೆಯು ಚೆನ್ನಾಗಿ ಸಿದ್ಧಿಸುತ್ತದೆ, ಮೋದಕವು ಈ ದೇವನಿಗೆ ಪ್ರಿಯವಾದ ನೈವೇದ್ಯ. ಪಾಕವಿಜ್ಞಾನವನ್ನರಿತು ತಯಾರಿಸುವ ಮೋದಕವು ಸಾತ್ತ್ವಿಕೋಪಾಸನೆಯ ಮಾರ್ಗಕ್ಕೆ ಬಹಳ ಪೋಷಕವಾಗಿರುತ್ತದೆ. ಅತ್ಯಂತ ಸಂತೋಷದಿಂದ ಮೋದಕವನ್ನು ಕೈಯಲ್ಲಿ ಹಿಡಿದು ಈ ದೇವನು ಭಕ್ತರಿಗೆ ಮುಕ್ತಿಯನ್ನು ನೀಡುವವನಾಗಿದ್ದಾನೆ. "ಮುದಾಕರಾತ್ತಮೋದಕಂ ಸದಾವಿಮುಕ್ತಿಸಾಧಕಮ್ ।"

ಬೇರೆ ಬೇರೆ ಕಾಮನೆಗಳನ್ನು—ಉದ್ದೇಶಗಳನ್ನು ಹೊಂದಿ ಭಿನ್ನ ಭಿನ್ನ ಪ್ರಕೃತಿಯ ಉಪಾಸಕರಿಗೆ ಉಪಾಸನಾಯೋಗ್ಯವಾದ ಬೇರೆ ಬೇರೆ ಗಣೇಶಮೂರ್ತಿಗಳು ಮುದ್ಗಲ, ಗಣೇಶ ಮೊದಲಾದ ಪುರಾಣಗಳಲ್ಲೂ ಹಾಗೂ ತಂತ್ರಶಾಸ್ತ್ರಗಳಲ್ಲೂ ವರ್ಣಿತವಾಗಿವೆ. "ಶ್ರೀತತ್ತ್ವನಿಧಿ" ಗ್ರಂಥದಲ್ಲಿ ಮೂವತ್ತೆರಡು ವಿಧವಾದ ಗಣೇಶನ ಧ್ಯಾನ ಮೂರ್ತಿಗಳು ವರ್ಣಿತವಾಗಿವೆ. ಆ ಮೂರ್ತಿಗಳಿಗೆ ಅನುಗುಣವಾದ ಧ್ಯಾನಶ್ಲೋಕಗಳೂ ಉಕ್ತವಾಗಿವೆ.

ಶ್ರೀ ಗಣೇಶನ ಉಪಾಸನಾಮೂರ್ತಿಗಳಲ್ಲಿ ಮಹಾಗಣಪತಿಯ ಮೂರ್ತಿಗೆ ವಿಶೇಷವಾದ ಮಹತ್ತ್ವವಿದೆ. ಗುರುಮುಖದಿಂದ ಉಪದೇಶ ಪಡೆದು ಈ ಮೂರ್ತಿಯನ್ನು ಉಪಾಸನೆ ಮಾಡುವವರಿಗೆ ಸಕಲ ಸಿದ್ಧಿಗಳೂ ಪ್ರಾಪ್ತವಾಗಿ ಕೊನೆಗೆ ಪರಮ ಮೋಕ್ಷಸಾಮ್ರಾಜ್ಯವು ಲಭಿಸುತ್ತದೆ. ದೇವತಾಶಕ್ತಿಯು ಮಂತ್ರಮಯವಾಗಿಯೂ ಇರುತ್ತದೆ. ತತ್ತ್ವಮಯವಾದ ವಿವಿಧ ಶಕ್ತಿಗಳಿಂದ

ಕೂಡಿ ವಿಶಿಷ್ಟ ಆಕಾರವನ್ನೂ ದೇವತೆಯು ತಾಳುತ್ತದೆ. ದೇವತಾ ಸ್ವರೂಪವು ಮೂಲದಲ್ಲಿ ತಾತ್ತ್ವಿಕವಾಗಿ ಪರಿಪೂರ್ಣ ಪರಂಜ್ಯೋತಿರ್ಮಯವಾಗಿರುತ್ತದೆ. ಸಾಕಾರ–ನಿರಾಕಾರ ಎರಡು ಭಾವನೆಗಳೂ ತಾತ್ತ್ವಿಕವಾಗಿವೆ. ದೇವತಾಸ್ವರೂಪವನ್ನು ಮಂತ್ರಮಯವಾಗಿ, ಯಂತ್ರಮಯವಾಗಿ, ತಂತ್ರಮಯವಾಗಿ, ವಿಶಿಷ್ಟ ಆಕಾರದಿಂದ ಕೂಡಿದ ಮೂರ್ತಿಮಯವಾಗಿ - ಹೀಗೆ ನಾನಾ ವಿಧವಾಗಿ ಭಾವಿಸುವ ರಹಸ್ಯ ಪೂರ್ಣವಾದ ಸಂಪ್ರದಾಯವಿದೆ. ಮಂತ್ರವಾಗಲಿ, ಯಂತ್ರವಾಗಲಿ, ತಂತ್ರವಾಗಲಿ, ಮೂರ್ತಿಯಾಗಲಿ ಸರ್ವಮೂಲವಾದ ಪರಿಪೂರ್ಣ ಜ್ಯೋತಿರ್ಮಯ ತತ್ತ್ವದಕಡೆಗೆ ಒಯ್ಯುವಂತಿರಬೇಕು. ಆದ್ದರಿಂದಲೇ ಸಂಪ್ರದಾಯಬದ್ಧವಾದ ರಹಸ್ಯವನ್ನು ಸದ್ಗುರುವಿನ ಉಪದೇಶದಿಂದ ತಿಳಿದು ಇವುಗಳನ್ನು ಸೇವಿಸಬೇಕು. ಕುವಿಚಾರಗಳಿಗೆ ಮನಸ್ಸಿನಲ್ಲಿ ಆಶ್ರಯ ಕೊಡದೆ ಶುದ್ಧ ಸಾತ್ತ್ವಿಕ ಭಾವನೆಯಿಂದ ಮಂತ್ರ, ಯಂತ್ರ, ತಂತ್ರ, ಮೂರ್ತಿಗಳನ್ನು ಭಾವಿಸುವ ಶ್ರದ್ಧಾವಂತರಾದ ಭಗವದ್ಭಕ್ತರಿಗೆ ಭಗವದನುಗ್ರಹದಿಂದ ಅಂತರಂಗದ ದಿವ್ಯಮಾರ್ಗಗಳು ಪ್ರಬೋಧಗೊಳ್ಳುತ್ತವೆ. ಇದಕ್ಕಾಗಿ ಜ್ಞಾನಿಗಳು, ಮಹರ್ಷಿಗಳು, ಭಗವದುಪಾಸಕರು ಅನೇಕ ದಿವ್ಯ ಸ್ತೋತ್ರಗಳನ್ನು ರಚಿಸಿ ಅನುಗ್ರಹಿಸಿದ್ದಾರೆ. ಇಂತಹ ಸ್ತೋತ್ರಗಳನ್ನು ಅರ್ಥಾನುಸಂಧಾನಪೂರ್ವಕವಾಗಿ ಪಠಿಸಿ ಮನನ ಮಾಡುತ್ತಿದ್ದರೆ ಭಗವದ್ಭಾವವು ತುಂಬಿ ಬೆಳೆದು ಭಗವದನುಗ್ರಹ ಮಾರ್ಗವು ತೆರೆಯುವುದರಲ್ಲಿ ಸಂದೇಹವೇ ಇಲ್ಲ. ಮಹಾತ್ಮರಿಂದ ರಚಿತವಾದ ದಿವ್ಯ ಸ್ತೋತ್ರಗಳ ಪಠನ ಮತ್ತು ಅರ್ಥಾನುಸಂಧಾನಗಳಿಂದ ಅಂತಃಕರಣವು ಪರಿಶುದ್ಧವಾಗಿ ಭಗವದ್ಭಕ್ತಿಯು ವರ್ಧಿಸುತ್ತದೆ.

ಈ ಸಣ್ಣ ಪುಸ್ತಕದಲ್ಲಿ ಶ್ರೀ ರಾಘವ ಚೈತನ್ಯರೆಂಬ ಭಗವದುಪಾಸಕರಾದ ಭಕ್ತ ಶ್ರೇಷ್ಠರು ರಚಿಸಿರುವ ಮಹಾಗಣಪತಿಸ್ತೋತ್ರವು ಕನ್ನಡ ಅನುವಾದ ಮತ್ತು ಭಾವಾರ್ಥಗಳೊಡನೆ ಮುದ್ರಿತವಾಗಿದೆ. ತಂತ್ರಶಾಸ್ತ್ರದಲ್ಲಿನ ಮಹಾಗಣಪತಿ ಮಂತ್ರೋಪಾಸನೆಗೆ ಸಂಬಂಧಪಟ್ಟ ಅನೇಕ ರಹಸ್ಯಗಳನ್ನೊಳಗೊಂಡ ಈ ಸ್ತೋತ್ರವು ಶ್ರೀ ಮಹಾಗಣಪತಿಯನ್ನು ಭಕ್ತಿಯಿಂದ ಭಾವಿಸಲು ಅತ್ಯಂತ ಉಪಕಾರಕವಾಗಿದೆ. ಚಿತ್ತಶುದ್ಧಿಯನ್ನು ಪಡೆದು ಧ್ಯಾನಯೋಗದಿಂದ ಉಪಾಸಿಸುವ ಯೋಗಿಗಳಿಗೂ, ಶುದ್ಧಜ್ಞಾನಮಾರ್ಗದಿಂದ ಪರಬ್ರಹ್ಮಸ್ವರೂಪವನ್ನು ಅರಿಯುವ ಜ್ಞಾನಿಗಳಿಗೂ ಮಹಾಗಣಪತಿಯು ಸೇವ್ಯನಾಗಿದ್ದಾನೆ. ಉಪನಿಷತ್ತುಗಳಲ್ಲಿ ವರ್ಣಿತವಾಗಿರುವ ಸಚ್ಚಿದಾನಂದರೂಪವಾದ ಭೂಮಪರಬ್ರಹ್ಮವೇ ಗಜಮುಖನಾದ ಮಹಾಗಣಪತಿಯಾಗಿ ವ್ಯಕ್ತವಾಗಿದೆ ಎಂಬ ತತ್ತ್ವಾರ್ಥವು ಮೊದಲನೆಯ ಪದ್ಯದಲ್ಲಿಯೇ ವರ್ಣಿತವಾಗಿರುವುದನ್ನು ಮನನ ಮಾಡುತ್ತಿದ್ದಂತೆಯೇ ತ್ರಿಕರಣಗಳೂ ಪರಿಶುದ್ಧವಾಗಿ ಹೃದಯದಲ್ಲಿ ಶ್ರೀ ಮಹಾಗಣಪತಿವೈಭವವು ಪ್ರಬೋಧಗೊಂಡು ತುಂಬಿದಂತೆ ಭಾಸವಾಗುತ್ತದೆ. ಈ ಪರಿಶುದ್ಧಭಾವದಿಂದ ಮುಂದಿನ ಸ್ತೋತ್ರ ಪದ್ಯಗಳನ್ನು ಪಠಿಸಿ ತತ್ತ್ವವನ್ನು ಮನನ ಮಾಡುವವರಿಗೆ ಶ್ರೀ ಮಹಾಗಣಪತಿಯ ಪರಮಾನುಗ್ರಹವು ಪ್ರಾಪ್ತವಾಗಲೆಂದು ಆ ಪರಬ್ರಹ್ಮಮೂರ್ತಿಯನ್ನು ಪ್ರಾರ್ಥಿಸುತ್ತೇನೆ.

ಮುಂದಿನ ಪದ್ಯಗಳಲ್ಲಿ ಶ್ರೀ ಮಹಾಗಣಪತಿಮಂತ್ರೋದ್ಧಾರ, ಪರಿವಾರ ಶಕ್ತಿಗಳಿಂದ ಕೂಡಿ ಷಟ್ಕೋಣಯಂತ್ರದ ಮಧ್ಯದಲ್ಲಿ ತ್ರಿಕೋಣದೊಳಗೆ ಬೆಳಗುವ

ಶ್ರೀ ಮಹಾಗಣಪತಿಮೂರ್ತಿಯ ದಿವ್ಯವೈಭವು ಅತ್ಯಂತ ತತ್ತ್ವಗರ್ಭಿತವಾಗಿಯೂ ಭಾವಪೂರ್ಣವಾಗಿಯೂ ವರ್ಣಿತವಾಗಿದೆ. ಇಲ್ಲಿ ವರ್ಣಿತವಾಗಿರುವ ಯಂತ್ರದ ರಹಸ್ಯವನ್ನು ಅರಿತರೆ, ಈ ಯಂತ್ರವು ನಮ್ಮೊಳಗೇ ಶಕ್ತಿಮಯವಾಗಿ ಜ್ಯೋತಿರ್ಮಯವಾಗಿ ಬೆಳಗುವ ಆಧ್ಯಾತ್ಮಿಕ ದಿವ್ಯಯಂತ್ರವಾಗಿದೆಯೆಂದು ಅರಿವಾಗುತ್ತದೆ. ಈ ಆಧ್ಯಾತ್ಮಿಕ ದಿವ್ಯಯಂತ್ರದಲ್ಲಿ-ದಿವ್ಯಚಕ್ರದಲ್ಲಿ ಬೆಳಗುವ ಶ್ರೀ ಮಹಾಗಣಪತಿ ಪರಬ್ರಹ್ಮಮೂರ್ತಿಗೆ ಮತ್ತೆ ಮತ್ತೆ ನಮೋನಮಃ.

ಇಂತಹ ಉತ್ತಮವಾದ ದಿವ್ಯಸ್ತೋತ್ರಕ್ಕೆ ಸಂಕ್ಷಿಪ್ತವಾದ ಭಾವಾರ್ಥವಿವರಣೆಯೊಡನೆ ಕನ್ನಡ ಅನುವಾದವನ್ನು ಬರೆದುಕೊಡಲು ನನ್ನನ್ನು ಪ್ರೇರಿಸಿದ ಮಹಾನುಭಾವರು ಶ್ರೀ ಟಿ.ಬಿ. ಲಕ್ಷ್ಮಣರಾಯರು. ಸ್ವತಃ ಭಗವದ್ಭಕ್ತರಾದ ಅವರು ಕವಿಗಳೂ ಆಗಿದ್ದಾರೆ. ಅವರ ಈ ಪವಿತ್ರಕಾರ್ಯವು ಶ್ರೀ ಮಹಾಗಣಪತಿಭಗವಂತನನ್ನು ಭಾವಿಸುವ ಭಕ್ತರಿಗೆ ಪೋಷಕವಾಗಲಿ ಎಂದು ಭಗವಂತನನ್ನು ಮತ್ತೆ ಪ್ರಾರ್ಥಿಸುತ್ತೇನೆ.

"ಸರ್ವತ್ರ ಪ್ರಥಮಾನಮುಗ್ಧಮಹಸೇತಸ್ಮೈಪರಸ್ಮೈನಮಃ" ॥

**ಶೇಷಾಚಲಶರ್ಮಾ**
ಅನುವಾದಕ

ಬೆಂಗಳೂರು.
ಆಂಗೀರಸ ಭಾದ್ರಪದ
ಶುಕ್ಲ ಚತುರ್ಥೀ ಸೋಮವಾರ
31–08–1992

卐 ॥ ಶ್ರೀ ಗಣೇಶಾಯ ನಮಃ ॥ 卐

## ಶ್ರೀ ರಾಘವಚೈತನ್ಯವಿರಚಿತಂ

# ಮಹಾಗಣಪತಿಸ್ತೋತ್ರಮ್ ।

**ಯೋಗಂ ಯೋಗವಿದಾಂ ವಿಧೂತವಿವಿಧವ್ಯಾಸಂಗಶುದ್ಧಾಶಯ –**
**ಪ್ರಾದುರ್ಭೂತಸುಧಾರಸಪ್ರಸೃಮರಧ್ಯಾನಾಸ್ಪದಾಧ್ಯಾಸಿನಾಮ್ ।**
**ಆನಂದಪ್ಲವಮಾನಬೋಧಮಧುರಾಮೋದಚ್ಛಟಾಮೇದುರಂ**
**ತಂ ಭೂಮಾನಮುಪಾಸ್ಮಹೇ ಪರಿಣತಂ ದಂತಾವಲಾಸ್ಯಾತ್ಮನಾ ॥೧॥**

(ವಿಧೂತ......ಧ್ಯಾಸಿನಾಮ್) ನಾನಾವಿಧ ವಿಷಯಾಸಕ್ತಿಗಳನ್ನು ಪರಿತ್ಯಾಗ ಮಾಡಿದವರೂ, ಪರಿಶುದ್ಧವಾದ ಹೃದಯದಲ್ಲಿ ಪ್ರಕಟಿತವಾದ ಆತ್ಮಾಮೃತರಸವುಳ್ಳವರೂ, ನಿರಂತರವಾದ ದೀರ್ಘಧ್ಯಾನಕ್ಕೆ ಆಶ್ರಯವಾದ ಯೋಗಭೂಮಿಯಲ್ಲಿ ನೆಲೆಸಿರುವವರೂ ಆದ, (ಯೋಗವಿದಾಂ) ಯೋಗಮಾರ್ಗೋಪಾಸಕರಿಗೆ (ಯೋಗಂ) ಯೋಗದಿಂದ ಪ್ರಾಪ್ಯನಾದವನೂ (ಆನಂದ....ಮೇದುರಂ) ಆನಂದದಿಂದ ಉಕ್ಕೇರಿದ ಪರಚೈತನ್ಯದ ಮಧುರ ಪರಿಮಳ ಪ್ರವಾಹದಿಂದ ವ್ಯಾಪ್ತವಾದವನೂ (ದಂತಾವಲಾಸ್ಯಾತ್ಮನಾ) ಮಹಾಗಜವದನರೂಪದಿಂದ (ಪರಿಣತಂ) ಪರಿಣಾಮ ಹೊಂದಿದವನೂ (ಭೂಮಾನಂ) ಉಪನಿಷತ್ತುಗಳಲ್ಲಿ ಪ್ರತಿಪಾದ್ಯವಾದ ಭೂಮಪರಬ್ರಹ್ಮನೂ, ಆದ (ತಂ) ಆ ಮಹಾಗಣಪತಿಯನ್ನು (ಉಪಾಸ್ಮಹೇ) ಉಪಾಸಿಸುತ್ತೇವೆ.

**ತಾತ್ಪರ್ಯ :** ಶ್ರೀ ಮಹಾಗಣಪತಿಯು ಯೋಗಮಾರ್ಗೋಪಾಸಕರಿಗೆ ಯೋಗ ವಿಧಾನದಿಂದ ಪ್ರಾಪ್ಯನಾದವನು, ಅಂತಹ ಯೋಗಿಗಳಾದರೋ, ನಾನಾವಿಧವಾದ ವಿಷಯಾಸಕ್ತಿಗಳನ್ನು ದೂರಮಾಡಿ ಶುದ್ಧವಾದ ಹೃದಯದಲ್ಲಿ ಪ್ರಕಟಿತವಾದ ಆತ್ಮಾಮೃತರಸವನ್ನು ಅನುಭವಿಸುತ್ತಾ, ನಿರಂತರವಾದ ದೀರ್ಘಧ್ಯಾನಕ್ಕೆ ಆಶ್ರಯವಾದ ಯೋಗಭೂಮಿಯಲ್ಲಿ ನೆಲೆಸಿರುವವರು. ಶ್ರೀ ಮಹಾಗಣಪತಿಯಮೂರ್ತಿಯಲ್ಲಿ ಪೂರ್ಣಾನಂದಮಯವಾದ ಚೈತನ್ಯದ ಮಧುರ ಪರಿಮಳ ಪ್ರವಾಹವು ತುಂಬಿದೆ. ಉಪನಿಷತ್ತುಗಳಲ್ಲಿ "ಭೂಮ" ಎಂಬುದಾಗಿ ವರ್ಣಿತವಾದ ಅಖಂಡ, ಅದ್ವಿತೀಯ ಪರಬ್ರಹ್ಮವೇ ಮಹಾಗಜವದನರೂಪದಿಂದ ಪರಿಣಾಮಹೊಂದಿ ಪ್ರಕಟಿತವಾಗಿದೆ. ಇಂತಹ ಶ್ರೀ ಮಹಾಗಣಪತಿಯನ್ನು ಉಪಾಸಿಸುತ್ತೇವೆ. [1]

**ತಾರಶ್ರೀಪರಶಕ್ತಿಕಾಮವಸುಧಾರೂಪಾನುಗಂ ಯಂ ವಿದು-**
**ಸ್ತಸ್ಮೈ ಸ್ತಾತ್ಪ್ರಣತಿರ್ಗಣಾಧಿಪತಯೇ ಯೋ ರಾಗಿಣಾಭ್ಯರ್ಥ್ಯತೇ ।**
**ಆಮಂತ್ರ್ಯ ಪ್ರಥಮಂ ವರೇತಿ ವರದೇತ್ಯಾರ್ತೇನ ಸರ್ವಂ ಜನಂ**
**ಸ್ವಾಮಿನ್ಮೇ ವಶಮಾನಯೇತಿ ಸತತಂ ಸ್ವಾಹಾದಿಭಿಃ ಪೂಜಿತಃ ॥೨॥**

(ಯಂ) ಯಾವನನ್ನು (ತಾರಶ್ರೀ...ನುಗಂ) ಪ್ರಣವ [ಓಂ], ಶ್ರೀಬೀಜ [ಶ್ರೀಂ], ಮಾಯಾಬೀಜ [ಹ್ರೀಂ], ಮನ್ಮಥ ಬೀಜ [ಕ್ಲೀಂ], ಪೃಥ್ವೀ ಬೀಜ [ಗ್ಲೌಂ] ಇವುಗಳಾದಮೇಲೆ "ಗಂ" ಬೀಜಾಕ್ಷರರೂಪನನ್ನಾಗಿ (ವಿದುಃ) ಸಾಧಕರು ಭಾವಿಸಿ ಉಪಾಸಿಸುತ್ತಾರೆಯೋ (ಯಃ) ಯಾವನು (ಸತತಂ) ಸದಾ (ಸ್ವಾಹಾದಿಭಿಃ) ಸ್ವಾಹಾ ಸ್ವಧಾ-ಮೊದಲಾದ ಶಕ್ತಿಗಳೊಡನೆ (ಪೂಜಿತಃ) ಪೂಜಿಸಲ್ಪಟ್ಟವನಾಗಿ (ಆರ್ತೇನ) ದುಃಖಪೀಡಿತನೂ (ರಾಗಿಣಾ) ಸಕಾಮನೂ ಆದ ಉಪಾಸಕನಿಂದ (ಪ್ರಥಮಂ) ಮೊದಲು (ವರೇತಿ) ಪರಮಶ್ರೇಷ್ಠನೇ ! ಎಂಬುದಾಗಿಯೂ, ಆಮೇಲೆ (ವರದೇತಿ) ವರದಾಯಕನೇ ! ಎಂಬುದಾಗಿಯೂ (ಆಮಂತ್ರ್ಯ) ಸಂಬೋಧಿಸಿ (ಸ್ವಾಮಿನ್) ಸ್ವಾಮಿಯೇ ! (ಸರ್ವಂ) ಎಲ್ಲ (ಜನಂ) ಜನರನ್ನೂ (ಮೇ) ನನ್ನ (ವಶಂ) ವಶಕ್ಕೆ (ಆನಯ) ತಂದುಕೊಡು (ಇತಿ) ಹೀಗೆಂಬುದಾಗಿ (ಅಭ್ಯರ್ಥ್ಯತೇ) ಪ್ರಾರ್ಥಿಸಲ್ಪಡುತ್ತಾನೆಯೋ (ತಸ್ಮೈ) ಅಂತಹ (ಗಣಾಧಿಪತಯೇ) ಗಣಗಳ ಅಧಿಪತಿಯಾದ ಮಹಾಗಣಪತಿಗೆ (ಪ್ರಣತಿಃ) ಪ್ರಣಾಮವು (ಸ್ಯಾತ್) ಸಲ್ಲಲಿ.

**ತಾತ್ಪರ್ಯ :** (ಈ ಶ್ಲೋಕದಲ್ಲಿ ಮಹಾಗಣಪತಿ ಮಂತ್ರದ ಸ್ವರೂಪವು ಸೂಚಿತವಾಗಿದೆ.) ಉಪಾಸಕರು ಶ್ರೀ ಮಹಾಗಣಪತಿಯನ್ನು ಓಂ, ಶ್ರೀಂ, ಹ್ರೀಂ, ಕ್ಲೀಂ, ಗ್ಲೌಂ, ಗಂ - ಎಂಬ (ಆರು) ಬೀಜಾಕ್ಷರಗಳುಳ್ಳವನನ್ನಾಗಿ ಭಾವಿಸಿ ಉಪಾಸಿಸುತ್ತಾರೆ. ದುಃಖಪೀಡಿತನಾಗಿ ಸಕಾಮನಾದ ಉಪಾಸಕನು ಸದಾ ಸ್ವಾಹಾ-ಸ್ವಧಾ ಮೊದಲಾದ ಶಕ್ತಿಗಳಿಂದ ಸಹಿತನಾದ ಮಹಾಗಣಪತಿಯನ್ನು ಪೂಜಿಸಿ ಈ ಆರು ಬೀಜಾಕ್ಷರಗಳನ್ನು ಉಚ್ಚರಿಸಿ, ಪರಮಶ್ರೇಷ್ಠನೇ ! ವರದಾಯಕನೇ ! ಎಂಬುದಾಗಿ ಮಹಾಗಣಪತಿ



ಯನ್ನು ಸಂಬೋಧಿಸಿ, ಸರ್ವಜನರನ್ನೂ ನನ್ನವಶಮಾಡು ಎಂಬುದಾಗಿ ಪ್ರಾರ್ಥಿಸುತ್ತಾನೆ.

ಶ್ರೀ ಮಹಾಗಣಪತಿಯ ಮಂತ್ರ ಈ ರೀತಿ ಇದೆ :-

"ಓಂ ಶ್ರೀಂ ಹ್ರೀಂ ಕ್ಲೀಂ ಗ್ಲೌಂ ಗಂ ಗಣಪತಯೇ ವರ ವರದ ಸರ್ವಜನಂ ಮೇ ವಶಮಾನಯ ಸ್ವಾಹಾ" ಈ ಮಂತ್ರದಲ್ಲಿ ಒಟ್ಟು ಇಪ್ಪತ್ತೆಂಟು ಅಕ್ಷರಗಳಿವೆ. ಈ ಬೀಜಾಕ್ಷರಗಳು ಸೂಕ್ಷ್ಮವೂ ಶಕ್ತಿರೂಪವೂ ಆದ ದೇವತಾಸ್ವರೂಪವಾಗಿವೆ. [2]

**ಕಲ್ಲೋಲಾಂಚಲಚುಂಬಿತಾಂಬುದತತಾವಿಕ್ಷುದ್ರವಾಂಭೋನಿಧೌ**
**ದ್ವೀಪೇ ರತ್ನಮಯೇ ಸುರದ್ರುಮವನಾಮೋದೈಕಮೇದಸ್ವಿನಿ ।**
**ಮೂಲೇ ಕಲ್ಪತರೋರ್ಮಹಾಮಣಿಮಯೇ ಪೀಠೇಽಕ್ಷರಾಂಭೋರುಹೇ**
**ಷಟ್ಕೋಣಾಕಲಿತತ್ರಿಕೋಣರಚನಾಸತ್ಕರ್ಣಿಕೇಽಮುಂ ಭಜೇ ||೩||**

(ಕಲ್ಲೋಲಾಂ....ತತೌ) ಅಲೆಗಳ ತುದಿಗಳಿಂದ ಮೋಡಗಳ ಸಾಲನ್ನು ಆಲಂಗಿಸಿರುವ (ಇಕ್ಷು....ನಿಧೌ) ಕಬ್ಬಿನರಸದ ಸಮುದ್ರದಲ್ಲಿ (ಸುರದ್ರುಮ....ಸ್ವಿನಿ) ಪಾರಿಜಾತ ಮುಂತಾದ ದೇವವೃಕ್ಷಗಳ ಉದ್ಯಾನದ ಪರಿಮಳದಿಂದ ಸಮೃದ್ಧವಾದ (ರತ್ನಮಯೇ) ರತ್ನಮಯವಾದ (ದ್ವೀಪೇ) ದ್ವೀಪದಲ್ಲಿ (ಕಲ್ಪತರೋಃ) ಕಲ್ಪವೃಕ್ಷದ (ಮೂಲೇ) ಬುಡದಲ್ಲಿ (ಮಹಾಮಣಿಮಯೇ) ಮಹಾರತ್ನಮಯವಾದ (ಪೀಠೇ) ಪೀಠದಲ್ಲಿ (ಷಟ್ಕೋಣಾ....ಕರ್ಣಿಕೇ) ಆರು ತ್ರಿಕೋಣಗಳಿಂದ ಕೂಡಿದ [ಮಧ್ಯ

ದಲ್ಲಿನ] ತ್ರಿಕೋಣಸ್ಥಾನದ ಕರ್ಣಿಕೆಯುಳ್ಳ (ಅಕ್ಷರಾಂಭೋರುಹೇ) ವರ್ಣಮಾತೃಕೆಗಳಿಂದ ಕೂಡಿದ ಕಮಲದಲ್ಲಿ (ಅಮುಂ) ಈ ಮಹಾಗಣಪತಿಯನ್ನು (ಭಜೇ) ಧ್ಯಾನಿಸಿ ಉಪಾಸಿಸುತ್ತೇನೆ.

**ತಾತ್ಪರ್ಯ :** ತನ್ನ ಅಲೆಗಳ ತುದಿಗಳಿಂದ ಮೋಡಗಳ ಸಾಲಿನವರೆಗೂ ವ್ಯಾಪಿಸಿರುವ ಕಬ್ಬಿನರಸದ ಸಮುದ್ರದಲ್ಲಿ ಪಾರಿಜಾತ ಮುಂತಾದ ದೇವವೃಕ್ಷಗಳ ಉದ್ಯಾನವಿದೆ. ಆ ಉದ್ಯಾನದ ಪರಿಮಳದಿಂದ ತುಂಬಿರುವ ಒಂದು ರತ್ನಮಯವಾದ ದ್ವೀಪ ಅಲ್ಲಿದೆ. ಅಲ್ಲಿ ಕಲ್ಪವೃಕ್ಷದ ಬುಡದಲ್ಲಿ ಮಹಾರತ್ನಮಯವಾದ ಒಂದು ಪೀಠವಿದೆ. ಆ ಪೀಠದಲ್ಲಿ ಸುತ್ತಲೂ ಆರು ತ್ರಿಕೋಣಗಳಿಂದ ಕೂಡಿದ ಒಂದು ಮಧ್ಯತ್ರಿಕೋಣ ಮತ್ತು ಆರುತ್ರಿಕೋಣಗಳ ಸುತ್ತ ಇರುವಂತೆ ಅಷ್ಟದಳ ಕಮಲವಿದೆ. ಈ ಕಮಲವು ಅಕ್ಷರ ಮಾತೃಕೆಗಳಿಂದ ಕೂಡಿರುತ್ತದೆ. ಇಂತಹ ಕಮಲದ ಕರ್ಣಿಕೆಯಂತಿರುವ ಮಧ್ಯತ್ರಿಕೋಣದೊಳಗೆ ಮಹಾಗಣಪತಿಯನ್ನು ಧ್ಯಾನ ಮಾಡಿ ಉಪಾಸನೆ ಮಾಡಬೇಕು.

**ವಿಶೇಷ ವಿಚಾರ :** ಶ್ರೀ ಮಹಾಗಣಪತಿಯನ್ನು ಪೂಜಿಸಿ ಉಪಾಸಿಸುವ ಯಂತ್ರದ ಸ್ವರೂಪವು ಈ ಶ್ಲೋಕದಲ್ಲಿ ವರ್ಣಿತವಾಗಿದೆ. ಇದು ಉಪಾಸಕನ ದೇಹದೊಳಗೇ ಇರುವ ತತ್ತ್ವಮಯವಾದ ಯಂತ್ರದ ಪ್ರತೀಕವಾಗಿದೆ. ಆದ್ದರಿಂದಲೇ ಈ ಯಂತ್ರವನ್ನು ನಿರ್ಮಿಸಿ ಪ್ರಾಣಪ್ರತಿಷ್ಠಾಪನೆಯನ್ನು ಮಾಡಿ ಪೂಜಿಸಬೇಕು. ಇಲ್ಲಿ ವರ್ಣಿತವಾಗಿರುವ ಕಬ್ಬಿನರಸದ ಸಮುದ್ರ ಮುಂತಾದುವೆಲ್ಲವನ್ನೂ ಉಪಾಸಕನು ತನ್ನ ದೇಹ



ಶ್ರೀ ರಾಘವಚೈತನ್ಯವಿರಚಿತಂ

# 卐 ಮಹಾಗಣಪತಿಸ್ತೋತ್ರಮ್ 卐



ಅನುವಾದಕರು : ಶೇಷಾಚಲಶರ್ಮಾ



ಶ್ರೀ ಮಹಾಗಣಪತಿಯಂತ್ರಂ

## ಶ್ರೀ ಮಹಾಗಣಪತಿಯ ಯಂತ್ರದಲ್ಲಿ ಸೂಚಿಸಿರುವ ಸಂಖ್ಯಾ ಸ್ಥಾನಗಳ ವಿವರಣೆ

1. ಕಲ್ಪವೃಕ್ಷದ ಬುಡದಲ್ಲಿ ಶ್ರೀ ಮಹಾಗಣಪತಿಯ ಸ್ಥಾನ ಓಂ ಗಂ
2. ಬಿಲ್ವವೃಕ್ಷದ ಕೆಳಗೆ ಲಕ್ಷ್ಮೀನಾರಾಯಣರ ಸ್ಥಾನ ಶ್ರೀಂ
3. ಆಲದ ಮರದ ಕೆಳಗೆ ಪಾರ್ವತೀಪರಮೇಶ್ವರರ ಸ್ಥಾನ ಹ್ರೀಂ
4. ಅತ್ತೀ ಮರದ ಕೆಳಗೆ ರತಿಮನ್ಮಥರ ಸ್ಥಾನ ಕ್ಲೀಂ
5. ಪ್ರಿಯಂಗು ವೃಕ್ಷದ ಕೆಳಗೆ ಭೂ ವರಾಹರ ಸ್ಥಾನ ಗ್ಲೌಂ
6. ಸಿದ್ಧಿದೇವೀ ಸಹಿತ ಆಮೋದ ಗಣಪತಿಯ ಸ್ಥಾನ
7. ಸಮೃದ್ಧಿದೇವೀ ಸಹಿತ ಪ್ರಮೋದ ಗಣಪತಿಯ ಸ್ಥಾನ
8. ಕಾಂತಿದೇವೀ ಸಹಿತ ಸುಮುಖ ಗಣಪತಿಯ ಸ್ಥಾನ
9. ಮದನಾವತೀದೇವೀ ಸಹಿತ ದುರ್ಮುಖ ಗಣಪತಿಯ ಸ್ಥಾನ
10. ಮದದ್ರವಾದೇವೀ ಸಹಿತ ವಿಘ್ನಗಣಪತಿಯ ಸ್ಥಾನ
11. ದ್ರಾವಿಣೀದೇವೀ ಸಹಿತ ವಿಘ್ನಕರ್ತೃ ಗಣಪತಿಯ ಸ್ಥಾನ
12. ವಸುಧಾದೇವೀ ಸಹಿತ ಶಂಖನಿಧಿಯ ಸ್ಥಾನ
13. ವಸುಮತೀದೇವೀ ಸಹಿತ ಪದ್ಮನಿಧಿಯ ಸ್ಥಾನ

14. ಓಂ ಓಂ ಗಾಂ ಹೃದಯಾಯ ನಮಃ
15. ಓಂ ಶ್ರೀಂ ಗೀಂ ಶಿರಸೇ ಸ್ವಾಹಾ
16. ಓಂ ಹ್ರೀಂ ಗೂಂ ಶಿಖಾಯೈ ವಷಟ್
17. ಓಂ ಕ್ಲೀಂ ಗೈಂ ಕವಚಾಯ ಹುಮ್
18. ಓಂ ಗ್ಲೌಂ ಗೌಂ ನೇತ್ರತ್ರಯಾಯ ವೌಷಟ್
19. ಓಂ ಗಂ ಗಃ ಅಸ್ತ್ರಾಯ ಫಟ್

20ರಿಂದ 27 ಕ್ರಮವಾಗಿ, ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ, ಚಾಮುಂಡಾ, ಮಹಾಲಕ್ಷ್ಮೀ ದೇವಿಗಳ ಸ್ಥಾನಗಳು

28ರಿಂದ 35 ಕ್ರಮವಾಗಿ, ಇಂದ್ರ, ಅಗ್ನಿ. ಯಮ, ನಿರ್‌ಋತಿ, ವರುಣ, ವಾಯು, ಕುಬೇರ, ಈಶಾನ ದೇವತೆಗಳ ಸ್ಥಾನಗಳು.

36ರಿಂದ 43 ಕ್ರಮವಾಗಿ, ವಜ್ರಾಯುಧ, ಶಕ್ತಿ, ದಂಡ, ಖಡ್ಗ, ಪಾಶ, ಅಂಕುಶ, ಗದೆ, ತ್ರಿಶೂಲಗಳೆಂಬ (ಅಷ್ಟದಿಕ್ಪಾಲಕರ) ಆಯುಧ ಶಕ್ತಿಗಳ ಸ್ಥಾನಗಳು.

ದೊಳಗೇ ತಾತ್ತ್ವಿಕವಾಗಿ ಭಾವಿಸಿಕೊಳ್ಳಬೇಕು. ಹೊರಗಿನ ಯಂತ್ರ ಬಾಹ್ಯ ಪೂಜೆಗಾಗಿ, ಒಳಗಿನ ತಾತ್ತ್ವಿಕಯಂತ್ರ ಅಂತರಂಗ ಪೂಜೆಗಾಗಿ. [3]

**ಚಕ್ರಪ್ರಾಸರಸಾಲಕಾರ್ಮುಕಗದಾಸದ್ಬೀಜಪೂರದ್ವಿಜ–**
**ವ್ರೀಹ್ಯಗ್ರೋತ್ಪಲಪಾಶಪಂಕಜಕರಂ ಶುಂಡಾಗ್ರಜಾಗ್ರದ್ಘಟಮ್ ।**
**ಆಶ್ಲಿಷ್ಟಂ ಪ್ರಿಯಯಾ ಸರೋಜಕರಯಾ ರತ್ನಸ್ಫುರದ್ಭೂಷಯಾ**
**ಮಾಣಿಕ್ಯಪ್ರತಿಮಂ ಮಹಾಗಣಪತಿಂ ವಿಶ್ವೇಶಮಾಶಾಸ್ಮಹೇ ॥೪॥**

(ಚಕ್ರಪ್ರಾಸ....ಕರಂ) ಚಕ್ರ, ತ್ರಿಶೂಲ, ಕಬ್ಬಿನಜಲ್ಲೆಯ ಬಿಲ್ಲು, ಗದೆ, ದಾಳಿಂಬೆ ಹಣ್ಣು, (ತನ್ನದೇ ಆದ) ದಂತ, ಬತ್ತದತೆನೆ, ನೈದಿಲೆಹೂ, ಪಾಶ, ತಾವರೆ ಹೂ - ಇವುಗಳನ್ನು ಕೈಗಳಲ್ಲಿ ಹೊಂದಿರುವವನೂ (ಶುಂಡಾ....ಟಮ್) ಸೊಂಡಲಿನ ತುದಿಯಲ್ಲಿ ಶೋಭಿಸುತ್ತಿರುವ [ರತ್ನ ಪೂರ್ಣವಾದ] ಸುವರ್ಣಕುಂಭವುಳ್ಳವನೂ (ಸರೋಜಕರಯಾ) ಎಡಗೈಯಲ್ಲಿ ಕಮಲವನ್ನು ಧರಿಸಿರುವವಳೂ (ರತ್ನ....ಷಯಾ) ರತ್ನಗಳಿಂದ ಬೆಳಗುತ್ತಿರುವ ಆಭರಣಗಳುಳ್ಳವಳೂ ಆದ (ಪ್ರಿಯಯಾ) ಪ್ರಿಯೆಯಿಂದ (ಆಶ್ಲಿಷ್ಟಮ್) ಬಲಗೈಯಿಂದ ಆಲಿಂಗಿಸಲ್ಪಟ್ಟಿರುವವನೂ (ಮಾಣಿಕ್ಯಪ್ರತಿಮಂ) ಪದ್ಮರಾಗ ಮಣಿಯಂತೆ ಕೆಂಪು ಕಾಂತಿಯುಳ್ಳವನೂ (ವಿಶ್ವೇಶಮ್) ಸರ್ವೇಶ್ವರನೂ ಆದ (ಮಹಾಗಣಪತಿಂ) ಮಹಾಗಣಪತಿಯನ್ನು (ಆಶಾಸ್ಮಹೇ) ಭಾವಿಸುತ್ತೇವೆ.

**ತಾತ್ಪರ್ಯ :** ಮಹಾಗಣಪತಿಯು ಹತ್ತು ಭುಜಗಳುಳ್ಳ ಮೂರ್ತಿ. ಬಲಗಡೆಯ ಐದು ಕೈಗಳಲ್ಲಿ ಮೇಲಿನಿಂದ ಕ್ರಮವಾಗಿ ಚಕ್ರ, ತ್ರಿಶೂಲ, ಇಕ್ಷುಧನುಸ್ಸು, ಗದೆ

ಮತ್ತು ದಾಳಿಂಬೆ ಹಣ್ಣುಗಳಿವೆ. ಎಡಗಡೆಯ ಐದು ಕೈಗಳಲ್ಲಿ ಕೆಳಗಿನಿಂದ ಮೇಲಕ್ಕೆ ಕ್ರಮವಾಗಿ ದಂತ, ಬತ್ತದತೆನೆ, ನೈದಿಲೆ ಹೂ, ಪಾಶ ಮತ್ತು ತಾವರೆಹೂಗಳಿವೆ. ಸೊಂಡಲಿನ ತುದಿಯಲ್ಲಿ ರತ್ನಪೂರ್ಣವಾದ ಸುವರ್ಣಕುಂಭವಿದೆ. ಎಡಗೈಯಲ್ಲಿ ಕಮಲವನ್ನು ಹಿಡಿದು ಬಲಗೈಯಿಂದ ದೇವಿಯು ಮಹಾಗಣಪತಿಯನ್ನು ಆಲಿಂಗನೆ ಮಾಡಿಕೊಂಡು ಅವನ ತೊಡೆಯಮೇಲೆ ಆಸೀನಳಾಗಿದ್ದಾಳೆ. ಆ ದೇವಿಯು ರತ್ನಾಭರಣಗಳಿಂದ ಶೋಭಿಸುತ್ತಿದ್ದಾಳೆ. ಮಹಾಗಣಪತಿಯು ಪದ್ಮರಾಗಮಣಿಯಂತೆ ಕೆಂಪಾದಕಾಂತಿಯಿಂದ ಬೆಳಗುತ್ತಿದ್ದಾನೆ. ವಿಶ್ವೇಶ್ವರನಾದ ಇಂತಹ ಶ್ರೀ ಮಹಾಗಣಪತಿಯನ್ನು ಧ್ಯಾನಮಾಡಬೇಕು. [4]

**ದಾನಾಂಭಃಪರಿಮೇದುರಪ್ರಸೃಮರವ್ಯಾಲಂಬಿರೋಲಂಬಭೃ-**
**ತ್ಸಿಂದೂರಾರುಣಗಂಡಮಂಡಲಯುಗವ್ಯಾಜಾತ್ಪ್ರಶಸ್ತಿದ್ವಯಮ್ ।**
**ತ್ರೈಲೋಕ್ಯೇಷ್ಟವಿಧಾನವರ್ಣಸುಭಗಂ ಯಃ ಪದ್ಮರಾಗೋಪಮಂ**
**ಧತ್ತೇ ಸ ಶ್ರಿಯಮಾತನೋತು ಸತತಂ ದೇವೋ ಗಣಾನಾಂ ಪತಿಃ ||೫||**

(ದಾನಾಂಭಃ........ವ್ಯಾಜಾತ್) ಮದಜಲದಿಂದ ವ್ಯಾಪ್ತವಾಗಿರುವ, ಸುತ್ತಲೂ ಹರಡಿಕೊಂಡು ಜೋತಾಡುತ್ತಿರುವ ಭ್ರಮರಗಳನ್ನು ಹೊಂದಿರುವ ಮತ್ತು ಕುಂಕುಮದಂತೆ ಕೆಂಪಾದ ಮಂಡಲಾಕಾರವಾದ ಎರಡು ಕುಂಭಪ್ರದೇಶಗಳ ನೆಪದಿಂದ (ತ್ರೈಲೋಕ್ಯೇ....ಸುಭಗಂ) ಮೂರು ಲೋಕಗಳ ಇಷ್ಟಾರ್ಥವನ್ನು ನೀಡುವ ಲೇಖನಾಕ್ಷರಗಳಿಂದ ರಮಣೀಯವಾಗಿರುವ (ಪದ್ಮರಾಗೋಪಮಂ) ಪದ್ಮರಾಗಮಣಿ



ಸದೃಶವಾದ (ಪ್ರಶಸ್ತಿದ್ವಯಂ) ಎರಡು ಪ್ರಶಸ್ತಿಗಳನ್ನು (ಯಃ) ಯಾವನು (ಧತ್ತೇ) ಧರಿಸಿದ್ದಾನೆಯೋ (ಸಃ) ಅಂತಹ (ಗಣಾನಾಂ) ಗಣಗಳಿಗೆ (ಪತಿಃ) ಒಡೆಯನಾದ (ದೇವಃ) ಮಹಾಗಣಪತಿಯು (ಸತತಂ) ಸದಾ (ಶ್ರಿಯಂ) ಸಂಪತ್ತನ್ನು (ಆತನೋತು) ಉಂಟುಮಾಡಲಿ

**ತಾತ್ಪರ್ಯ :** ಮಹಾಗಣಪತಿಯ ಎರಡು ಕುಂಭಪ್ರದೇಶಗಳೂ ಮದಜಲದಿಂದ ವ್ಯಾಪ್ತವಾಗಿವೆ. ಆ ಮದಜಲದ ಸೌಗಂಧ್ಯದಿಂದ ಮಾರುಹೋಗಿ ಸುತ್ತಲೂ ಭ್ರಮರಗಳು ಹರಡಿಕೊಂಡು ಜೋತಾಡುತ್ತಿವೆ. ಮಹಾಗಣಪತಿಯ ಎರಡು ಕುಂಭಪ್ರದೇಶಗಳೂ ಸಿಂದೂರ (ಕುಂಕುಮ)ದಂತೆ ಕೆಂಪುಕಾಂತಿಯುಳ್ಳದ್ದಾಗಿವೆ. ಇಂತಹ ಈ ಎರಡು ಕುಂಭಪ್ರದೇಶಗಳೂ ಮಹಾಗಣಪತಿಯ ಎರಡು ಪ್ರಶಸ್ತಿಗಳಂತಿವೆ. ಕುಂಭಪ್ರದೇಶದಲ್ಲಿ ಹರಡಿಕೊಂಡಿರುವ ಭ್ರಮರಗಳು - ಶ್ರೀ ಮಹಾಗಣಪತಿಯು ಮೂರುಲೋಕಗಳ ಇಷ್ಟಾರ್ಥಗಳನ್ನು ನೀಡುವನೆಂಬ ಪ್ರಶಸ್ತಿವಾಕ್ಯದ ಲೇಖನಾಕ್ಷರಗಳಂತಿವೆ. ಪ್ರಮಥಗಣಗಳಿಗೆ ಅಧಿಪತಿಯಾದ ಈ ಶ್ರೀ ಮಹಾಗಣಪತಿ ದೇವನು ಸದಾ ಸಂಪತ್ತನ್ನು ನೀಡಲಿ. [5]

**ಭ್ರಾಮ್ಯನ್ಮಂದರಘೂರ್ಣನಾಪರವಶಕ್ಷೀರಾಬ್ಧಿವೀಚಿಚ್ಛಟಾ-**
**ಸಚ್ಛಾಯಾಶ್ಚಲಚಾಮರವ್ಯತಿಕರಶ್ರೀಗರ್ವಸರ್ವಂಕಷಾಃ ।**
**ದಿಕ್ಕಾಂತಾಘನಸಾರಚಂದನರಸಾಸಾರಾಃ ಶ್ರಯಂತಾಂ ಮನಃ**
**ಸ್ವಚ್ಛಂದಪ್ರಸರಪ್ರಲಿಪ್ತವಿಯತೋ ಹೇರಂಬದಂತತ್ವಿಷಃ ||೬||**

(ಭ್ರಾಮ್ಯನ್ಮಂದರ...ಚ್ಛಾಯಾಃ) ತಿರುಗುತ್ತಿರುವ ಮಂದರ ಪರ್ವತದ ಸುತ್ತಾಟಕ್ಕೆ ಅಧೀನವಾಗಿರುವ ಕ್ಷೀರಸಮುದ್ರದ ತರಂಗಗಳ ಅಗ್ರಭಾಗಗಳಿಗೆ ಸದೃಶವಾಗಿರುವ (ಚಲಚಾಮರ....ಕಷಾಃ) ಚಲಿಸುತ್ತಿರುವ ಚಾಮರದ ಸಂನಿವೇಶದ ಸೊಬಗಿನ ಗರ್ವವನ್ನು ಅಪಹರಿಸುವಂತ (ದಿಕ್ಕಾಂತಾ....ಸಾರಾಃ) ದಿಗಂಗನೆಯರಿಗೆ ಕರ್ಪೂರ ಮತ್ತು ಚಂದನರಸದಧಾರೆಗಳಾಗಿರುವ (ಸ್ವಚ್ಛಂದ....ವಿಯತಃ) ತಡೆಯಿಲ್ಲದ ಹರಡುವಿಕೆಯಿಂದ ಆಕಾಶವನ್ನು ವ್ಯಾಪಿಸಿರುವ (ಹೇರಂಬದಂತತ್ವಿಷಃ) ಮಹಾಗಣಪತಿಯ ದಂತಕಾಂತಿಗಳು (ಮನಃ) ನಮ್ಮ ಮನಸ್ಸನ್ನು (ಶ್ರಯಂತಾಮ್) ಸೇರಿ ನೆಲೆಸಲಿ.

**ತಾತ್ಪರ್ಯ :** (ಶ್ರೀ ಮಹಾಗಣಪತಿಯ ದಂತಕಾಂತಿಗಳು ಉಪಾಸಕರ ಮನಸ್ಸಿನಲ್ಲಿ ಗೋಚರಿಸಿ ಧ್ಯಾನಕ್ಕೆ ವಿಷಯವಾಗಲಿ ಎಂದು ಇಲ್ಲಿ ಪ್ರಾರ್ಥನೆಮಾಡಲಾಗಿದೆ).

ಮಹಾಗಣಪತಿಯ ದಂತಕಾಂತಿಗಳು ಕ್ಷೀರಸಮುದ್ರಮಥನಕಾಲದಲ್ಲಿ ಸುತ್ತುತ್ತಿರುವ ಮಂದರಪರ್ವತದ ಸುತ್ತಾಟಕ್ಕೆ ಸಿಕ್ಕಿರುವ ತರಂಗಗಳ ಅಗ್ರಭಾಗಗಳಂತೆ ಸ್ವಚ್ಛವಾಗಿ ಶೋಭಿಸುತ್ತಿವೆ. ಮಹಾಗಣಪತಿಯ ದಂತಕಾಂತಿಗಳು ಚಲಿಸುತ್ತಿರುವ ಬಿಳಿಚಾಮರದ ಸೊಬಗನ್ನೂ ಮೀರಿಸಿವೆ. ದಿಗಂತಗಳವರೆಗೂ ಹರಡಿರುವ ಮಹಾಗಣಪತಿಯ ದಂತಕಾಂತಿಗಳು ದಿಗಂಗನೆಯರ ಪಚ್ಚಕರ್ಪೂರ ಹಾಗೂ ಚಂದನ ಲೇಪನ ದ್ರವದ ಪ್ರವಾಹಗಳಂತೆ ಶೋಭಿಸುತ್ತಿವೆ. ಮಹಾಗಣಪತಿಯ ದಂತಕಾಂತಿಗಳು ತಡೆಯಿಲ್ಲದೆ ಎಲ್ಲೆಲ್ಲೂ ಹರಡಿರುವುದರಿಂದ ಆಕಾಶಕ್ಕೆ ಲೇಪನಮಾಡಿರುವಂತಿವೆ. ಇಂತಹ



ಮಹಾಗಣಪತಿಯ ದಂತಕಾಂತಿಗಳು ಉಪಾಸಕರ ಮನಸ್ಸಿನಲ್ಲಿ ಗೋಚರಿಸಿ ಧ್ಯಾನಕ್ಕೆ ವಿಷಯವಾಗಲಿ. [6]

**ಮುಕ್ತಾಜಾಲಕರಂಬಿತಪ್ರವಿಕಸನ್ಮಾಣಿಕ್ಯಪುಂಜಚ್ಛಟಾ-**
**ಕಾಂತಾಃ ಕಂಬುಕದಂಬಚುಂಬಿತಘನಾಭೋಗಪ್ರವಾಲೋಪಮಾಃ ।**
**ಜ್ಯೋತ್ಸ್ನಾಪೂರತರಂಗಮಂಥರತರತ್ಸಂಧ್ಯಾವಯಸ್ಯಾಶ್ಚಿರಂ**
**ಹೇರಂಬಸ್ಯ ಜಯಂತಿ ದಂತಕಿರಣಾಕೀರ್ಣಾಃ ಶರೀರತ್ವಿಷಃ ॥೭॥**

(ಮುಕ್ತಾಜಾಲ....ಕಾಂತಾಃ) ಮುತ್ತಿನಮಣಿಗಳ ಸಮೂಹದಿಂದ ಮಿಶ್ರಿತವಾಗಿ ಬೆಳಗುತ್ತಿರುವ ಪದ್ಮರಾಗಮಣಿಗಳ ಸಮೂಹದ ಪಂಕ್ತಿಯಂತೆ ಮನೋಹರವಾಗಿರುವ (ಕಂಬು....ಪಮಾಃ) ಶಂಖಗಳ ಸಮೂಹಗಳೊಡನೆ ಕೂಡಿಕೊಂಡಿರುವ ದೊಡ್ಡಗಾತ್ರದ ಹವಳಮಣಿಗಳಿಗೆ ಸದೃಶವಾಗಿರುವ (ಜ್ಯೋತ್ಸ್ನಾ....ವಯಸ್ಯಾಃ) ಬೆಳದಿಂಗಳಿನ ಪ್ರವಾಹದ ತರಂಗದಲ್ಲಿ ಮೆಲ್ಲನೆ ಸೇರಿಕೊಳ್ಳುವ ಸಂಧ್ಯೆಯ ಸಖಿಯರಾಗಿರುವ [ಸಂಧ್ಯೆಗೆ ಸದೃಶವಾಗಿರುವ] (ಹೇರಂಬಸ್ಯ) ಮಹಾಗಣಪತಿಯ (ದಂತಕಿರಣಾಕೀರ್ಣಾಃ) ದಂತಕಿರಣಗಳಿಂದ ವ್ಯಾಪ್ತವಾಗಿರುವ (ಶರೀರತ್ವಿಷಃ) ಶರೀರಕಾಂತಿಗಳು (ಚಿರಂ) ಶಾಶ್ವತವಾಗಿ (ಜಯಂತಿ) ಸರ್ವೋತ್ಕರ್ಷದಿಂದ ಬೆಳಗುತ್ತವೆ.
**ತಾತ್ಪರ್ಯ :** ಮಹಾಗಣಪತಿಯ ದಂತಕಾಂತಿಯು ಶುಭ್ರವಾದುದು, ಅವನ ಶರೀರದ ಕಾಂತಿಯು ಕೆಂಪಾದುದು. ಶುಭ್ರವಾದ ದಂತಕಾಂತಿಯೊಡನೆ ಮಿಶ್ರವಾಗಿರುವ ಶರೀರಕಾಂತಿಯು ಮುತ್ತಿನರಾಶಿಯೊಡನೆ ಸೇರಿಕೊಂಡಿರುವ ಪದ್ಮರಾಗಮಣಿ

ಸಮೂಹದ ಕಾಂತಿಯಂತೆಯೂ, ಶುಭ್ರವಾದ ಶಂಖಸಮೂಹದೊಂದಿಗೆ ಸೇರಿರುವ ದೊಡ್ಡಗಾತ್ರದ ಪ್ರವಾಳಮಣಿ ಸಮೂಹದ ಕಾಂತಿಯಂತೆಯೂ, ತುಂಬುಬೆಳದಿಂಗಳಿನೊಂದಿಗೆ ಸೇರಿಕೊಂಡಿರುವ ಸಂಧ್ಯಾಕಾಲದ ಕಾಂತಿಯಂತೆಯೂ ಅತ್ಯಂತ ಮನೋಹರವಾಗಿ ಬೆಳಗುತ್ತಿದೆಯೆಂದು ಇಲ್ಲಿ ವರ್ಣಿತವಾಗಿದೆ. [7]

**ಶುಂಡಾಗ್ರಾಕಲಿತೇನ ಹೇಮಕಲಶೇನಾವರ್ಜಿತೇನ ಕ್ಷರ–**
**ನ್ನಾನಾರತ್ನಚಯೇನ ಸಾಧಕಜನಾನ್ಸಂಭಾವಯನ್ಕೋಟಿಶಃ ।**
**ದಾನಾಮೋದವಿನೋದಲುಬ್ಧಮಧುಪಪ್ರೋತ್ಸಾರಣಾವಿರ್ಭವ-**
**ತ್ಕರ್ಣಾಂದೋಲನಖೇಲನೋ ವಿಜಯತೇ ದೇವೋ ಗಣಗ್ರಾಮಣೀಃ ॥೮॥**

(ಶುಂಡಾಗ್ರಾಕಲಿತೇನ)ಸೊಂಡಲಿನ ತುದಿಯಲ್ಲಿ ಧರಿಸಲ್ಪಟ್ಟಿರುವ(ಹೇಮಕಲಶೇನ) ಸುವರ್ಣಕುಂಭದ ಮೂಲಕ (ಆವರ್ಜಿತೇನ) ಬಗ್ಗಿಸಲ್ಪಟ್ಟ (ಕ್ಷರನ್ನಾ........ಚಯೇನ) ಸುರಿಯುತ್ತಿರುವ ನಾನಾವಿಧವಾದ ರತ್ನಸಮೂಹದಿಂದ (ಕೋಟಿಶಃ) ಕೋಟಿಗಟ್ಟಲೆ (ಸಾಧಕಜನಾನ್) ಉಪಾಸಕಜನರನ್ನು (ಸಂಭಾವಯನ್) ಏಳಿಗೆಪಡಿಸುತ್ತಾ (ದಾನಾಮೋದ....ಖೇಲನಃ) ಮದಜಲದ ಪರಿಮಳವನ್ನು ಪಡೆದು ವಿನೋದಿಸಲು ಆಸೆಪಟ್ಟ ಭ್ರಮರಗಳನ್ನು ಅಟ್ಟುವುದಕ್ಕಾಗಿ ಪ್ರಕಟವಾದ ಕರ್ಣಾಂದೋಲನ-ಲೀಲೆಯುಳ್ಳವನಾದ (ಗಣಗ್ರಾಮಣೀಃ) ಪ್ರಮಥಗಣಗಳಿಗೆ ನಾಯಕನಾದ (ದೇವಃ) ಮಹಾಗಣಪತಿದೇವನು (ವಿಜಯತೇ) ಸರ್ವೋತ್ಕರ್ಷದಿಂದ ಬೆಳಗುತ್ತಾನೆ.



**ತಾತ್ಪರ್ಯ :** ಶ್ರೀ ಮಹಾಗಣಪತಿಯು ತನ್ನ ಸೊಂಡಲಿನ ತುದಿಯಲ್ಲಿ ಸ್ವಲ್ಪ ಬಗ್ಗಿರುವ ಸುವರ್ಣಕುಂಭವನ್ನು ಧರಿಸಿದ್ದಾನೆ. ಆ ಕುಂಭದ ಮೂಲಕ ಅದರೊಳಗಿರುವ ನಾನಾವಿಧವಾದ ರತ್ನಗಳನ್ನು ಸುರಿಸುತ್ತಾ ಆ ದೇವನು ಕೋಟಿಗಟ್ಟಲೆ ಭಕ್ತರಿಗೆ ಸಂಪತ್ತನ್ನು ನೀಡಿ ಅನುಗ್ರಹಿಸುತ್ತಾನೆ. ತನ್ನ ಕುಂಭಸ್ಥಳದಿಂದ ಹರಿಯುತ್ತಿರುವ ಮದಜಲದ ಪರಿಮಳಕ್ಕೆ ಆಸೆಪಟ್ಟು ಹಾರಾಡುತ್ತಿರುವ ಭ್ರಮರಗಳನ್ನು ಅಟ್ಟುವುದಕ್ಕಾಗಿ ಮಹಾಗಣಪತಿಯು ತನ್ನ ವಿಶಾಲವಾದ ಕಿವಿಗಳನ್ನು ಅಲ್ಲಾಡಿಸುತ್ತಿರುವುದು ಅವನಿಗೆ ಒಂದು ಕ್ರೀಡಾವಿನೋದವಾಗಿದೆ. ಹೀಗೆ ಪ್ರಮಥಗಣಗಳಿಗೆ ಅಧಿಪತಿಯಾದ ಮಹಾಗಣಪತಿಯು ಸರ್ವಶ್ರೇಷ್ಠನಾಗಿ ಶೋಭಿಸುತ್ತಿದ್ದಾನೆ. [8]

**ಹೇರಂಬಂ ಪ್ರಣಮಾಮಿ ಯಸ್ಯ ಪುರತಃ ಶಾಂಡಿಲ್ಯಮೂಲೇ ಶ್ರಿಯಾ**
**ಬಿಭ್ರತ್ಯಾಂಬುರುಹೇ ಸಮಂ ಮಧುರಿಪುಸ್ತೇ ಶಂಖಚಕ್ರೇ ವಹನ್ ।**
**ನ್ಯಗ್ರೋಧಸ್ಯ ತಲೇ ಸಹಾದ್ರಿಸುತಯಾ ಶಂಭುಸ್ತಥಾ ದಕ್ಷಿಣೇ**
**ಬಿಭ್ರಾಣಃ ಪರಶುಂ ತ್ರಿಶೂಲಮಿತಯಾ ಪಾಶಾಂಕುಶಾಭ್ಯಾಂ ಶುಭಮ್ ॥೯॥**

(ಶಾಂಡಿಲ್ಯಮೂಲೇ) ಬಿಲ್ವವೃಕ್ಷದ ಮೂಲದಲ್ಲಿ (ಯಸ್ಯ) ಯಾವ ಮಹಾಗಣಪತಿಯ (ಪುರತಃ) ಮುಂಭಾಗದಲ್ಲಿ (ಅಂಬುರುಹೇ) ಎರಡು ಕಮಲಗಳನ್ನು (ಬಿಭ್ರತ್ಯಾ) ಹಿಡಿದುಕೊಂಡಿರುವ (ಶ್ರಿಯಾ ಸಮಂ) ಲಕ್ಷ್ಮಿಯೊಡನೆ (ತೇ) ಪ್ರಸಿದ್ಧವಾದ (ಶಂಖಚಕ್ರೇ) ಶಂಖಚಕ್ರಗಳನ್ನು (ವಹನ್) ಧರಿಸಿದವನಾಗಿ (ಮಧುರಿಪುಃ) ಮಹಾವಿಷ್ಣುವು ಇದ್ದಾನೆಯೋ, (ತಥಾ) ಹಾಗೆಯೇ (ದಕ್ಷಿಣೇ) ಮಹಾಗಣಪತಿಯ

ಬಲಭಾಗದಲ್ಲಿ (ನ್ಯಗ್ರೋಧಸ್ಯ) ಆಲದಮರದ (ತಲೇ) ಕೆಳಗಡೆಯಲ್ಲಿ (ಪಾಶಾಂಕುಶಾಭ್ಯಾಂ) ಪಾಶ ಮತ್ತು ಅಂಕುಶಗಳಿಂದ (ಇತಯಾ) ಸಮೇತವಾಗಿರುವ (ಅದ್ರಿಸುತಯಾ ಸಹ) ಪಾರ್ವತಿಯೊಡನೆ (ಪರಶುಂ) ಕೊಡಲಿಯನ್ನೂ (ತ್ರಿಶೂಲಂ) ತ್ರಿಶೂಲವನ್ನೂ (ಬಿಭ್ರಾಣಃ) ಧರಿಸಿದವನಾಗಿ (ಶಂಭುಃ) ಶಿವನೂ ಇದ್ದಾನೆಯೋ, ಅಂತಹ (ಶುಭಂ) ಮಂಗಳಕರನಾದ (ಹೇರಂಬಂ) ಮಹಾಗಣಪತಿಯನ್ನು (ಪ್ರಣಮಾಮಿ) ನಮಸ್ಕರಿಸುತ್ತೇನೆ.

**ತಾತ್ಪರ್ಯ :** ಹಿಂದೆ ಹೇಳಿದ ಪೀಠದಲ್ಲಿ ತ್ರಿಕೋಣದ ಹೊರಭಾಗದಲ್ಲಿ ಅಗ್ರಭಾಗದಲ್ಲಿ ಅಂದರೆ ಪೂರ್ವದಿಕ್ಕಿನಲ್ಲಿ ಬಿಲ್ವವೃಕ್ಷದ ಕೆಳಗೆ ಎರಡು ಕೈಗಳಲ್ಲೂ ಕಮಲಗಳನ್ನು ಧರಿಸಿರುವ ಲಕ್ಷ್ಮಿಯೊಡನೆ ಮಹಾವಿಷ್ಣುವು ಶಂಖಚಕ್ರಗಳನ್ನು ಧರಿಸಿ ನೆಲೆಸಿದ್ದಾನೆ. ದಕ್ಷಿಣ ಪಾರ್ಶ್ವದಲ್ಲಿ (ತ್ರಿಕೋಣದ ಬಲಭಾಗದಲ್ಲಿ) ವಟವೃಕ್ಷದ ಕೆಳಗಡೆ ಪಾಶ ಮತ್ತು ಅಂಕುಶಗಳನ್ನು ಧರಿಸಿರುವ ಪಾರ್ವತಿಯೊಡನೆ ಶಿವನು ಕೊಡಲಿ ಮತ್ತು ತ್ರಿಶೂಲಗಳನ್ನು ಧರಿಸಿ ನೆಲೆಸಿದ್ದಾನೆ. [9]

**ಪಶ್ಚಾತ್ಪಿಪ್ಪಲಮಾಶ್ರಿತೋ ರತಿಪತಿರ್ದೇವಸ್ಯ ರತ್ಯೋತ್ಪಲೇ**
**ಬಿಭ್ರತ್ಯಾ ಸಮಮೈಕ್ಷವಂ ಧನುರಿಷೂನ್ಪೌಷ್ಪಾನ್ವಹನ್ಪಂಚ ಚ ।**
**ವಾಮೇ ಚಕ್ರಗದಾಧರಃ ಸ ಭಗವಾನ್ಕ್ರೋಡಃ ಪ್ರಿಯಂಗೋಸ್ತಲೇ**
**ಹಸ್ತೋದ್ಯಚ್ಛುಕಶಾಲಿಮಂಜರಿಕಯಾ ದೇವ್ಯಾ ಧರಣ್ಯಾ ಸಹ ॥೧೦॥**



(ದೇವಸ್ಯ) ಮಹಾಗಣಪತಿ ದೇವನ (ಪಶ್ಚಾತ್) ಹಿಂಭಾಗದಲ್ಲಿ (ಉತ್ಪಲೇ) ಎರಡು ನೈದಿಲೆಹೂಗಳನ್ನು (ಬಿಭ್ರತ್ಯಾ) ಹಿಡಿದುಕೊಂಡಿರುವ (ರತ್ಯಾಸಮಂ) ರತಿಯೊಡನೆ (ಐಕ್ಷವಂ) ಕಬ್ಬಿನಜಲ್ಲೆಯ (ಧನುಃ) ಧನುಸ್ಸನ್ನೂ (ಪೌಷ್ಪಾನ್) ಪುಷ್ಪಮಯವಾದ (ಪಂಚ) ಐದು (ಇಷೂನ್ ಚ) ಬಾಣಗಳನ್ನೂ (ವಹನ್) ಧರಿಸಿದವನಾಗಿ (ಪಿಪ್ಪಲಂ) ಅರಳಿಮರವನ್ನು (ಆಶ್ರಿತಃ) ಆಶ್ರಯಿಸಿದವನಾದ (ರತಿಪತಿಃ) ರತಿಪತಿಯಾದ ಮನ್ಮಥನು-ನೆಲೆಸಿದ್ದಾನೆ. (ವಾಮೇ) ಮಹಾಗಣಪತಿಯ ಎಡಭಾಗದಲ್ಲಿ (ಹಸ್ತೋದ್ಯ ...ಕಯಾ) ಕೈಗಳಮೇಲಿರುವ ಗಿಳಿ ಮತ್ತು ಬತ್ತದತೆನೆಗಳುಳ್ಳ (ಧರಣ್ಯಾ ದೇವ್ಯಾ ಸಹ) ಧರಣೀದೇವಿಯೊಡನೆ (ಚಕ್ರಗದಾಧರಃ) ಚಕ್ರ ಮತ್ತು ಗದೆಗಳನ್ನು ಧರಿಸಿದವನಾದ (ಸಃ) ಪ್ರಸಿದ್ಧನಾದ (ಭಗವಾನ್) ಭಗವಂತನಾದ (ಕ್ರೋಡಃ) ವರಾಹನು ನೆಲೆಸಿದ್ದಾನೆ.

**ತಾತ್ಪರ್ಯ :** ಹಿಂದೆ ಹೇಳಿದ ಪೀಠದಲ್ಲಿ ಮಹಾಗಣಪತಿದೇವನ ಹಿಂಭಾಗದಲ್ಲಿ ಅರಳಿಮರದಕೆಳಗೆ ಕೈಗಳಲ್ಲಿ ಎರಡು ನೈದಿಲೆ ಹೂಗಳನ್ನು ಹಿಡಿದಿರುವ ರತಿಯೊಡನೆ ಮನ್ಮಥನು ಇಕ್ಷುಧನುಸ್ಸನ್ನೂ, ಐದು ಹೂಬಾಣಗಳನ್ನೂ ಧರಿಸಿ ನೆಲೆಸಿದ್ದಾನೆ. ಮಹಾಗಣಪತಿಯ ಎಡಭಾಗದಲ್ಲಿ ಪ್ರಿಯಂಗುವೃಕ್ಷದ ಕೆಳಗಡೆ ಕೈಗಳಲ್ಲಿ ಗಿಳಿ ಮತ್ತು ಬತ್ತದತೆನೆಗಳನ್ನು ಹಿಡಿದುಕೊಂಡಿರುವ ಧರಣೀದೇವಿಯೊಡನೆ ವರಾಹಭಗವಂತನು ಚಕ್ರ ಮತ್ತು ಗದೆಗಳನ್ನು ಧರಿಸಿದವನಾಗಿ ನೆಲೆಸಿದ್ದಾನೆ. (ಇಂತಹ ಮಹಾಗಣಪತಿಯನ್ನು ನಮಸ್ಕರಿಸುತ್ತೇನೆ ಎಂಬುದಾಗಿ ಹಿಂದಿನ ಶ್ಲೋಕದಿಂದ ಇಲ್ಲಿ ವಾಕ್ಯವನ್ನು ಪೂರ್ತಿಮಾಡಿಕೊಳ್ಳಬೇಕು.) [10]

ಷಟ್ಕೋಣಾಶ್ರಿಷು ಷಟ್ಸು ಷಡ್ ಗಜಮುಖಾಃ ಪಾಶಾಂಕುಶಾಭೀವರಾ-
ನ್ಬಿಭ್ರಾಣಾಃ ಪ್ರಮದಾಸಖಾಃ ಪೃಥುಮಹಾಶೋಣಾಶ್ಮಪುಂಜತ್ವಿಷಃ ।
ಆಮೋದಃ ಪುರತಃ ಪ್ರಮೋದಸುಮುಖೌ ತಂ ಚಾಭಿತೋ ದುರ್ಮುಖಃ
ಪಶ್ಚಾತ್ಪಾರ್ಶ್ವಗತೋಽಸ್ಯ ವಿಘ್ನ ಇತಿ ಯೋ ಯೋ ವಿಘ್ನಕರ್ತ್ರೇತಿ ಚ ||೧೧||

(ಷಟ್ಸು) ಆರು (ಷಟ್ಕೋಣಾಶ್ರಿಷು) ಷಟ್ಕೋಣ ಪೀಠದ [ಆರು] ಪಾಳಿಗಳಲ್ಲಿ (ಪಾಶಾಂ...ವರಾನ್) ಪಾಶ, ಅಂಕುಶ, ಅಭಯಮುದ್ರೆ ಮತ್ತು ವರದಮುದ್ರೆಗಳನ್ನೂ (ಬಿಭ್ರಾಣಾಃ) ಧರಿಸಿದವರಾದ (ಪ್ರಮದಾಸಖಾಃ) ಪತ್ನೀ ಸಮೇತರಾದ (ಪೃಥು...ತ್ವಿಷಃ) ದೊಡ್ಡಗಾತ್ರದ ಪದ್ಮರಾಗಮಣಿಗಳ ದೊಡ್ಡರಾಶಿಯಂತೆ ಕಾಂತಿಯುಳ್ಳವರಾದ (ಷಟ್) ಆರುಮಂದಿ (ಗಜಮುಖಾಃ) ಗಜವದನರಾದ ಗಣಪತಿಗಳು-ನೆಲೆಸಿದ್ದಾರೆ. ಅವರುಗಳು ಯಾರುಯಾರೆಂದರೆ (ಪುರತಃ) ಮುಂದುಗಡೆ [ಮುಂಭಾಗದ ಪಾಳಿಯಲ್ಲಿ](ಆಮೋದಃ) ಆಮೋದನೆಂಬ ಗಣಪತಿಯು(ತಂ ಚಾಭಿತಃ) ಅವನಿಗೆ ಎರಡು ಕಡೆಗಳಲ್ಲಿಯೂ (ಪ್ರಮೋದ ಸುಮುಖೌ) ಆಗ್ನೇಯ ದಿಕ್ಕಿನ ಪಾಳಿಯಲ್ಲಿ ಪ್ರಮೋದನೆಂಬ ಗಣಪತಿಯು. ಈಶಾನ್ಯ ದಿಕ್ಕಿನ ಪಾಳಿಯಲ್ಲಿ ಸುಮುಖನೆಂಬ ಗಣಪತಿಯು (ಪಶ್ಚಾತ್) ಪಶ್ಚಿಮ ದಿಕ್ಕಿನ ಪಾಳಿಯಲ್ಲಿ (ದುರ್ಮುಖಃ) ದುರ್ಮುಖನೆಂಬ ಗಣಪತಿಯು (ಅಸ್ಯ) ಈ ದೇವನ (ಪಾರ್ಶ್ವಗತಃ) ಪಾರ್ಶ್ವದಲ್ಲಿರುವವನು [ನೈರ್‌ಋತ್ಯ ದಿಕ್ಕಿನ ಪಾಳಿಯಲ್ಲಿ] (ಯಃ) ಯಾವನು (ವಿಘ್ನ ಇತಿ) ವಿಘ್ನನೆಂಬುದಾಗಿ ಪ್ರಸಿದ್ಧನಾಗಿದ್ದಾನೆಯೋ (ಚ) ಮತ್ತು [ಮತ್ತೊಂದು ಪಾರ್ಶ್ವದಲ್ಲಿ ಅಂದರೆ



ವಾಯುವ್ಯ ದಿಕ್ಕಿನ ಪಾಳಿಯಲ್ಲಿರುವವನು] (ಯಃ) ಯಾವನು (ವಿಘ್ನಕರ್ತಾ ಇತಿ) ವಿಘ್ನಕರ್ತನೆಂದು ಪ್ರಸಿದ್ಧನಾಗಿದ್ದಾನೆಯೋ.

**ತಾತ್ಪರ್ಯ :** ಹಿಂದೆ ಹೇಳಿದ ಪೀಠದ ಷಟ್ಕೋಣದ ಆರು ಪಾಳಿಗಳಲ್ಲೂ ಆರು ಮಂದಿ ಗಜಮುಖರಾದ ಗಣಪತಿಗಳು ಇದ್ದಾರೆ. ಅವರುಗಳು ದೊಡ್ಡದಾದ ಪದ್ಮರಾಗಮಣಿಗಳ ದೊಡ್ಡರಾಶಿಯಂತೆ ಕೆಂಪು ಕಾಂತಿಯುಳ್ಳವರಾಗಿದ್ದಾರೆ. ಅವರು ಪಾಶ, ಅಂಕುಶ, ಅಭಯಮುದ್ರೆ ಮತ್ತು ವರದಮುದ್ರೆಗಳನ್ನು ಧರಿಸಿ ತಮ್ಮ ತಮ್ಮ ಪತ್ನಿಯರೊಡನೆ ಇದ್ದಾರೆ, ಪೂರ್ವದಿಕ್ಕಿನ (ಮುಂಭಾಗದ) ಪಾಳಿಯಲ್ಲಿರುವವನು ಆಮೋದನೆಂಬ ಗಣಪತಿ. ಆಗ್ನೇಯದಿಕ್ಕಿನ ಪಾಳಿಯಲ್ಲಿ ಪ್ರಮೋದನೆಂಬ ಗಣಪತಿಯೂ, ಈಶಾನ್ಯದಿಕ್ಕಿನ ಪಾಳಿಯಲ್ಲಿ ಸುಮುಖನೆಂಬ ಗಣಪತಿಯೂ ಇದ್ದಾರೆ. ಹಿಂಭಾಗದ ಅಂದರೆ ಪಶ್ಚಿಮದಿಕ್ಕಿನ ಪಾಳಿಯಲ್ಲಿ ದುರ್ಮುಖನೆಂಬ ಗಣಪತಿಯು ಇದ್ದಾನೆ. ನೈರ್‌ಋತ್ಯದಿಕ್ಕಿನ ಪಾಳಿಯಲ್ಲಿ ವಿಘ್ನನೆಂಬ ಗಣಪತಿಯೂ, ವಾಯುವ್ಯ ದಿಕ್ಕಿನ ಪಾಳಿಯಲ್ಲಿ ವಿಘ್ನಕರ್ತನೆಂಬ ಗಣಪತಿಯೂ ಇದ್ದಾರೆ. [ಉಪಾಸನೆಯಲ್ಲಿ ಇವರುಗಳನ್ನೂ ಧ್ಯಾನಮಾಡಬೇಕು]. [11]

ಆಮೋದಾದಿಗಣೇಶ್ವರಪ್ರಿಯತಮಾಸ್ತತ್ರೈವ ನಿತ್ಯಂ ಸ್ಥಿತಾಃ
ಕಾಂತಾಶ್ಲೇಷರಸಜ್ಞಮಂಥರದೃಶಃ ಸಿದ್ಧಿಃ ಸಮೃದ್ಧಿಸ್ತತಃ ।
ಕಾನ್ತಿರ್ಯಾ ಮದನಾವತೀತ್ಯಪಿ ತಥಾ ಕಲ್ಪೇಷು ಯಾ ಗೀಯತೇ
ಸಾನ್ಯಾ ಯಾಪಿ ಮದದ್ರವಾ ತದಪರಾ ದ್ರಾವಿಣ್ಯಮೂಃ ಪೂಜಿತಾಃ ||೧೨||

(ಕಾಂತಾ...ದೃಶಃ) [ತಮ್ಮ ತಮ್ಮ] ಪ್ರಿಯತಮರ ಆಲಿಂಗನಸೌಖ್ಯವನ್ನು ತಿಳಿದವರಾಗಿ ಅನುರಾಗಪೂರ್ಣವಾದ ದೃಷ್ಟಿಯುಳ್ಳವರಾದ ಆಮೋದಾ...ತಮಾಃ] ಆಮೋದ ಮೊದಲಾದ ಗಣಪತಿಗಳ ಪ್ರಿಯತಮೆಯರು (ತತ್ರೈವ) ಆ ಷಟ್ಕೋಣಗಳ ಪಾಳಿಗಳಲ್ಲಿಯೇ (ನಿತ್ಯಂ) ಸದಾ (ಸ್ಥಿತಾಃ) ಇರುವವರು. [ಅವರುಗಳು ಯಾರು ಯಾರೆಂದರೆ] (ಸಿದ್ಧಿಃ) ಸಿದ್ಧಿ (ಸಮೃದ್ಧಿಃ) ಸಮೃದ್ಧಿ (ತತಃ) ನಂತರ (ಕಾಂತಿಃ) ಕಾಂತಿ (ಅಪಿ) ಮತ್ತು (ತಥಾ) ಹಾಗೆಯೇ (ಕಲ್ಪೇಷು) ಉಪಾಸನಾ ಕಲ್ಪಗಳಲ್ಲಿ (ಯಾ) ಯಾರು ಮದನಾವತೀ ಇತಿ) ಮದನಾವತೀ ಎಂಬುದಾಗಿ (ಗೀಯತೇ) ಹೇಳಲ್ಪಡುತ್ತಾಳೆಯೋ [ಆ ಮದನಾವತೀ] (ಅಪಿ) ಮತ್ತು (ಸಾನ್ಯಾ) ಆ ಮತ್ತೊಬ್ಬಳು (ಯಾ) ಯಾರು(ಮದದ್ರವಾ) ಮದದ್ರವಾ-ಎಂದು ಕೀರ್ತಿತಳಾಗಿದ್ದಾಳೆಯೋ- ಅವಳು. [ಹಾಗೂ] (ತದಪರಾ) ಮತ್ತೊಬ್ಬಳು (ದ್ರಾವಿಣೀ) ದ್ರಾವಿಣೀ [ಈ ಪ್ರಕಾರವಾಗಿ] (ಅಮೂಃ) ಇವರುಗಳು (ಪೂಜಿತಾಃ)[ಆ ಪೀಠದಲ್ಲಿ ಗಣಪತಿಗಳೊಡನೆ] ಪೂಜಿತರಾಗ ತ್ತಾರೆ.

**ತಾತ್ಪರ್ಯ :** ಆಮೋದ ಮೊದಲಾದ ಗಣಪತಿಗಳ ಪ್ರಿಯತಮೆಯರು ಒಂದು ಕೈಯಲ್ಲಿ ಕಮಲವನ್ನು ಹಿಡಿದು ಮತ್ತೊಂದು ಕೈಯಿಂದ ತಮ್ಮ ತಮ್ಮ ಪತಿಯರನ್ನು ಆಲಿಂಗಿಸಿಕೊಂಡು ಅನುರಾಗಪೂರ್ಣವಾದ ದೃಷ್ಟಿಗಳುಳ್ಳವರಾಗಿದ್ದಾರೆ. ಆಮೋದ ನೆಂಬ ಗಣಪತಿಯ ಪತ್ನಿಯು ಸಿದ್ಧಿದೇವೀ. ಪ್ರಮೋದಗಣಪತಿಯ ಪತ್ನಿಯು ಸಮೃದ್ಧಿದೇವೀ. ಸುಮುಖ ಗಣಪತಿಯ ಪತ್ನಿಯ ಹೆಸರು ಕಾಂತಿದೇವೀ. ಮದ ನಾವತೀ ಎಂಬ ದೇವಿಯು ದುರ್ಮುಖಗಣಪತಿಯ ಪತ್ನಿಯು. ವಿಘ್ನನೆಂಬ



ಗಣಪತಿಯ ಪತ್ನಿಯು ಮದದ್ರವಾದೇವೀ. ದ್ರಾವಿಣೀ ಎಂಬ ದೇವಿಯು ವಿಘ್ನ ಕರ್ತಾ ಎಂಬ ಗಣಪತಿಯ ಪತ್ನಿಯು. ಇವರ ಪತಿಯರೊಡನೆ ಈ ದೇವಿಯರಿಗೂ ಪೂಜೆ ನಡೆಯಬೇಕು. [12]

**ಆಶ್ಲಿಷ್ಟೌ ವಸುಧೇತ್ಯಥೋ ವಸುಮತೀ ತಾಭ್ಯಾಂ ಸಿತಾಲೋಹಿತೌ**
**ವರ್ಷಂತೌ ವಸು ಪಾರ್ಶ್ವಯೋರ್ವಿಲಸತಸ್ತೌ ಶಂಖಪದ್ಮೌ ನಿಧೀ।**
**ಅಂಗಾನ್ಯನ್ವಥ ಮಾತರಶ್ಚ ಪರಿತಃ ಶಕ್ರಾದಯೋಽಬ್ಜಾಶ್ರಯಾ-**
**ಸ್ತದ್ಬಾಹ್ಯೇ ಕುಲಿಶಾದಯಃ ಪರಿಪತತ್ಕಾಲಾನಲಜ್ಯೋತಿಷಃ ||೧೩||**

(ಪಾರ್ಶ್ವಯೋಃ) ಆ ಷಟ್ಕೋಣದ ಎರಡು ಪಾರ್ಶ್ವಗಳಲ್ಲೂ ಕ್ರಮವಾಗಿ (ವಸುಧಾ ಇತಿ) ವಸುಧಾ ಎಂಬ (ಅಥೋ) ಮತ್ತು (ವಸುಮತೀ) ವಸುಮತೀ ಎಂಬ (ತಾಭ್ಯಾಮ್) ಆ ಇಬ್ಬರಿಂದ (ಆಶ್ಲಿಷ್ಟೌ) ಆಲಿಂಗಿಸಲ್ಪಟ್ಟವರಾದ (ಸಿತಾ-ಲೋಹಿತೌ) ಬಿಳಿ ಮತ್ತು ಕೆಂಪುವರ್ಣಗಳುಳ್ಳವರಾದ (ವಸು) ಧನವನ್ನು (ವರ್ಷಂತೌ) ವರ್ಷಿಸುತ್ತಿರುವವರಾದ (ತೌ) ಪ್ರಸಿದ್ಧರಾದ (ಶಂಖ ಪದ್ಮೌ) ಶಂಖ ಮತ್ತು ಪದ್ಮರೆಂಬ (ನಿಧೀ) ಇಬ್ಬರು ನಿಧಿಗಳು (ವಿಲಸತಃ) ಶೋಭಿಸುತ್ತಾರೆ. [ಈ ಇಬ್ಬರು ನಿಧಿಗಳ ಧ್ಯಾನವನ್ನೂ ಮಾಡಬೇಕು] (ಅನು) ಇದಾದ ಮೇಲೆ (ಅಂಗಾನಿ) [ಹೃದಯ ಮುಂತಾದ ಆರು] ಅಂಗಗಳು [ಧ್ಯಾನಮಾಡಲ್ಪಡಬೇಕು] (ಅಥಚ) ಮತ್ತು (ಪರಿತಃ) ಸುತ್ತಲೂ (ಮಾತರಃ) [ಬ್ರಾಹ್ಮೀ ಮೊದಲಾದ ಎಂಟು ಮಂದಿ] ಮಾತೃ ದೇವತೆಗಳು [ಧ್ಯಾನಮಾಡಲ್ಪಡಬೇಕು] (ಶಕ್ರಾದಯಃ) ಇಂದ್ರಮೊದಲಾದವರು

[ಎಂಟು ಮಂದಿ ದಿಕ್ಪಾಲಕರು] (ಅಬ್ಜಾಶ್ರಯಾಃ) ಅಷ್ಟದಲ ಕಮಲದಲ್ಲಿ [ಎಂಟು ದಳಗಳಲ್ಲಿ] ನೆಲೆಸಿದ್ದಾರೆ. (ತದ್ಬಾಹ್ಯೇ) ಅವರಿಂದ ಹೊರಗೆ [ಅವರ ಬಳಿಯಲ್ಲೇ] (ಪರಿಪತತ್...ತ್ವಿಷಃ) ಸುತ್ತಲೂ ಪ್ರಸರಿಸಿರುವ ಕಾಲಾಗ್ನಿಗೆ ಸಮಾನವಾದ ಜ್ವಾಲೆಗಳುಳ್ಳ (ಕುಲಿಶಾದಯಃ) ವಜ್ರ ಮೊದಲಾದ ಆಯುಧಗಳು ಶೋಭಿಸುತ್ತವೆ. [ಧ್ಯಾನಿಸಲ್ಪಡಬೇಕು]

**ತಾತ್ಪರ್ಯ :** ಷಟ್ಕೋಣದ ಬಲ ಹಾಗೂ ಎಡಭಾಗಗಳಲ್ಲಿ ಶಂಖ ಮತ್ತು ಪದ್ಮ ನಿಧಿಗಳನ್ನು ಧ್ಯಾನಮಾಡಬೇಕು. ಶಂಖನಿಧಿಯು ಶುಭ್ರವರ್ಣಮಯವಾದುದು. ಪದ್ಮನಿಧಿಯು ಕೆಂಪುವರ್ಣದಿಂದ ಶೋಭಿಸುತ್ತಿರುವುದು. ಶಂಖನಿಧಿಯ ಪತ್ನಿಯು ವಸುಧಾ. ಪದ್ಮನಿಧಿಯ ಪತ್ನಿಯ ಹೆಸರು ವಸುಮತೀ. ಈ ಎರಡು ನಿಧಿಗಳೂ ತಮ್ಮ ಪತ್ನಿಯರಿಂದ ಆಲಿಂಗಿತರಾಗಿದ್ದಾರೆ. ಹೀಗೆ ಬೆಳಗುವ ಎರಡು ನಿಧಿಗಳೂ ಧನಸಂಪತ್ತನ್ನು ಸುರಿಸುತ್ತಿದ್ದಾರೆ. ಇವರ ಧ್ಯಾನವಾದ ಮೇಲೆ ಷಟ್ಕೋಣಗಳಿಗೂ ಅಷ್ಟದಲ ಪದ್ಮಕ್ಕೂ ಮಧ್ಯೆ ಅಂತರಾಳ ಪಾಳಿಗಳಲ್ಲಿ ನಮಃ, ಸ್ವಾಹಾ, ವಷಟ್, ಹುಂ, ವೌಷಟ್, ಫಟ್ ಎಂಬ ಹೃದಯಾದಿ ಅಂಗಮಂತ್ರಗಳನ್ನು ಧ್ಯಾನಿಸಬೇಕು. ಅದರ ಸುತ್ತಲೂ ಕಮಲದ ಎಂಟುದಳಗಳಲ್ಲಿ ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ, ಚಾಮುಂಡಾ, ಮಹಾಲಕ್ಷ್ಮೀ–ಎಂಬ ಎಂಟು ಮಂದಿ ಮಾತೃದೇವತೆಗಳನ್ನು ಧ್ಯಾನಮಾಡಬೇಕು. ಈ ಎಂಟು ದಳಗಳೊಳಗೇ ಅಗ್ರ ಭಾಗಕ್ಕೆ ಸೇರಿದಂತೆ ಎಂಟು ದಿಕ್ಕುಗಳಲ್ಲಿ ಎಂಟುಮಂದಿ ದಿಕ್ಪಾಲಕರನ್ನು ಧ್ಯಾನಿಸಬೇಕು. ಅಲ್ಲಿಂದ ಸ್ವಲ್ಪ ಹೊರಗೆ ಅವರುಗಳ ಬಳಿಯಲ್ಲೇ ದಿಕ್ಪಾಲಕರ ಆಯುಧ



ಗಳಾದ ವಜ್ರ, ಶಕ್ತಿ, ದಂಡ, ಖಡ್ಗ, ಪಾಶ, ಅಂಕುಶ, ಗದೆ, ತ್ರಿಶೂಲ–ಗಳನ್ನು ಧ್ಯಾನಿಸಬೇಕು. ಈ ಆಯುಧಗಳು ಕಾಲಾಗ್ನಿಗೆ ಸದೃಶವಾದ ತಮ್ಮ ಜ್ವಾಲೆಗಳಿಂದ ಸುತ್ತಲೂ ಪ್ರಸರಿಸಿ ಜ್ವಲಿಸುತ್ತವೆ. [13]

**ಇತ್ಥಂ ವಿಷ್ಣುಶಿವಾದಿತತ್ತ್ವತನವೇ ಶ್ರೀವಕ್ರತುಂಡಾಯ ಹುಂ-**
**ಕಾರಾಕ್ಷಿಪ್ತಸಮಸ್ತದೈತ್ಯಪೃತನಾವ್ರಾತಾಯ ದೀಪ್ತತ್ವಿಷೇ ।**
**ಆನಂದ್ಯೈಕರಸಾವಬೋಧಲಹರೀ ವಿಧ್ವಸ್ತಸರ್ವೋರ್ಮಯೇ**
**ಸರ್ವತ್ರ ಪ್ರಥಮಾನಮುಗ್ಧಮಹಸೇ ತಸ್ಮೈ ಪರಸ್ಮೈ ನಮಃ ॥೧೪॥**

(ಇತ್ಥಂ) ಈ ಪ್ರಕಾರವಾಗಿ (ವಿಷ್ಣು...ತನವೇ) ವಿಷ್ಣು, ಶಿವ-ಮೊದಲಾದವರ ಸ್ವರೂಪವನ್ನೇ ತನ್ನ ಶರೀರವಾಗಿ ಉಳ್ಳ (ಹುಂಕಾರಾ...ವ್ರಾತಾಯ) ಹುಂಕಾರ ಮಾತ್ರದಿಂದಲೇ ಸಮಸ್ತ ಅಸುರಸೇನಾಸಮೂಹವನ್ನು ದೂರತಳ್ಳಿದವನಾದ (ದೀಪ್ತತ್ವಿಷೇ] ಪ್ರಜ್ವಲಿತವಾದ ಕಾಂತಿಯುಳ್ಳವನಾದ (ಆನಂದ್ಯೈಕ....ರ್ಮಯೇ) ಪರಮಾನಂದರೂಪವಾದ ರಸಪ್ರಬೋಧ ತರಂಗಗಳಿಂದ [ಸಾಧಕರ] ಸಮಸ್ತ ಕ್ಲೇಶಗಳನ್ನೂ ನಾಶಪಡಿಸಿದವನಾದ (ಸರ್ವತ್ರ) ಎಲ್ಲೆಡೆಯೂ (ಪ್ರಥಮಾನ ಮುಗ್ಧಮಹಸೇ) ಪ್ರಸರಿಸಿರುವ ಸುಂದರವಾದ ತೇಜಸ್ಸುಳ್ಳವನಾದ (ಪರಸ್ಮೈ) ಲೋಕಾತೀತನಾದ ಆ (ವಕ್ರತುಂಡಾಯ) ಡೊಂಕಾಗಿ ಬಾಗಿದ ಸೊಂಡಿಲುಳ್ಳ ಶ್ರೀಮಹಾಗಣಪತಿಗೆ (ನಮಃ) ನಮಸ್ಕಾರ.

**ತಾತ್ಪರ್ಯ :** ಹಿಂದೆ ಒಂಬತ್ತು ಮತ್ತು ಹತ್ತನೇ ಪದ್ಯಗಳಲ್ಲಿ ವರ್ಣಿತವಾಗಿರುವ ವಿಷ್ಣು, ಶಿವ-ಮೊದಲಾದವರೆಲ್ಲರೂ ಶ್ರೀ ಮಹಾಗಣಪತಿಯ ವಿಭೂತಿಗಳೇ ಆಗಿದ್ದಾರೆ. ಆದ್ದರಿಂದ ಶ್ರೀ ಮಹಾಗಣಪತಿಯು ಸರ್ವದೇವಮಯನು. ಸಮಸ್ತ ರಾಕ್ಷಸ ಸಮೂಹವೂ ಮಹಾಗಣಪತಿಯ ಹುಂಕಾರ ಮಾತ್ರದಿಂದಲೇ ಹೆದರಿ ದೂರಸರಿಯುತ್ತದೆ. ಮಹಾಗಣಪತಿಯು ಅತ್ಯಂತ ಪ್ರಜ್ವಲಿತವಾದ ಕಾಂತಿಯುಳ್ಳವನಾಗಿದ್ದಾನೆ. ಶ್ರೀ ಮಹಾಗಣಪತಿಯ ಅನುಗ್ರಹದಿಂದ ಸಾಧಕರಲ್ಲಿಪ ರಮಾನಂದಮಯವಾದ ರಸವು ಪ್ರಬೋಧಗೊಳ್ಳುತ್ತವೆ. ಅವರಿಂದ ಅವರ ಸಮಸ್ತ ಕ್ಲೇಶಗಳೂ ನಾಶವಾಗುತ್ತವೆ. ಶ್ರೀ ಮಹಾಗಣಪತಿಯ ಸುಂದರ ತೇಜಸ್ಸು ಎಲ್ಲೆಡೆಯಲ್ಲೂ ಪ್ರಸರಿಸಿದೆ, ಶ್ರೀಮಹಾಗಣಪತಿಯ ಸೊಂಡಿಲು ಪ್ರಣವಾಕಾರದಲ್ಲಿ ಡೊಂಕಾಗಿ ಬಾಗಿದೆ. ಲೋಕಾತೀತನಾದ ಇಂತಹ ಶ್ರೀ ಮಹಾಗಣಪತಿಗೆ ನಮ್ಮ ನಮಸ್ಕಾರ. [ಶ್ರೀ ಗಣಪತಿಯ "ವಕ್ರತುಂಡಾಯ ಹುಂ" ಎಂಬ ಷಡಕ್ಷರೀ ಮಂತ್ರವೂ ಇಲ್ಲಿ ಸೂಚಿತವಾಗಿದೆ.] [14]

**ಸೇವಾಹೇವಾಕಿದೇವಾಸುರನರನಿಕರಸ್ಫಾರಕೋಟೀರಕೋಟೀ-**
**ಕೋಟಿನ್ಯಾಟೀಕಮಾನದ್ಯುಮಣಿಸಮಮಣಿಶ್ರೇಣಿಭಾವೇಣಿಕಾನಾಮ್ ।**
**ರಾಜನ್ನೀರಾಜನಶ್ರೀಸಖಚರಣನಖದ್ಯೋತವಿದ್ಯೋತಮಾನಃ**
**ಶ್ರೇಯಃ ಸ್ಥೇಯಃ ಸ ದೇಯಾನ್ಮಮ ವಿಮಲದೃಶಾ ಬಂಧುರಂ**
**ಸಿಂಧುರಾಸ್ಯಃ ॥೧೫॥**

(ಸೇವಾಹೇವಾಕಿ...ವೇಣಿಕಾನಾಂ) ಸೇವೆಮಾಡುವುದರಲ್ಲಿ ಅಭಿಲಾಷೆಯುಳ್ಳ



ವರಾದ ದೇವತೆಗಳು, ಅಸುರರು ಮತ್ತು ನರರು-ಇವರುಗಳ ಸಮೂಹಗಳ ಪ್ರಕಾಶಮಾನವಾದ ಕೋಟಿಗಟ್ಟಲೆ ಕಿರೀಟಗಳ ತುದಿಗಳಲ್ಲಿ ಒಂದಕ್ಕೊಂದು ತಗುಲಿದ ಸೂರ್ಯ ಸಮಾನವಾದ ರತ್ನಗಳ ಸಾಲಿನ ಕಾಂತಿ ಪ್ರವಾಹಗಳ (ರಾಜನ್ನೀ...ವಿದ್ಯೋತಮಾನಃ) ಬೆಳಗುತ್ತಿರುವ ಮಂಗಳಾರತಿಯ ಕಾಂತಿಗೆ ಸಮಾನವಾದ ಕಾಲುಗುರುಗಳ ಪ್ರಕಾಶದಿಂದ ಶೋಭಿಸುತ್ತಿರುವವನಾದ (ಸಃ) ಆ [ಸಾಧಕರ ಹೃದಯದಲ್ಲಿ ನೆಲೆಸಿದವನಾದ] (ಸಿಂಧುರಾಸ್ಯಃ) ಗಜವದನನಾದ ಶ್ರೀ ಮಹಾಗಣಪತಿಯು (ವಿಮಲದೃಶಾ) ಪ್ರಸನ್ನವಾದ ದೃಷ್ಟಿಯಿಂದ (ಮೇ) ನನಗೆ (ಬಂಧುರಂ) ರಮಣೀಯವಾದ (ಸ್ಥೇಯಃ) ಶಾಶ್ವತವಾದ (ಶ್ರೇಯಃ) ಶ್ರೇಯಸ್ಸನ್ನು (ದೇಯಾತ್) ನೀಡಲಿ.

**ತಾತ್ಪರ್ಯ :** ಶ್ರೀ ಮಹಾಗಣಪತಿಗೆ ಸೇವೆಸಲ್ಲಿಸಲು ಅಭಿಲಾಷೆಯುಳ್ಳವರಾದ ದೇವತೆಗಳು, ಅಸುರರು, ನರರು-ಇವರ ಸಮೂಹಗಳು "ನಾ ಮುಂದು ತಾನು ಮುಂದು" ಎಂದು ಮುನ್ನುಗ್ಗುತ್ತಿದ್ದಾರೆ. ಅವರ ಪ್ರಕಾಶಮಾನವಾದ ಕೋಟಿ-ಕೋಟಿ ಕಿರೀಟಗಳ ಅಗ್ರಭಾಗಗಳಲ್ಲಿ ಬೆಳಗುತ್ತಿರುವ ಸೂರ್ಯ ಸಮಾನವಾದ ರತ್ನಗಳು ಒಂದಕ್ಕೊಂದು ತಾಗುತ್ತವೆ. ಇಂತಹ ರತ್ನಗಳ ಸಾಲುಗಳ ಕಾಂತಿ ಪ್ರವಾಹಗಳಿಂದ ಶ್ರೀ ಮಹಾಗಣಪತಿಗೆ ಮಂಗಳ ನೀರಾಜನವಾಗುತ್ತದೆ. ಅಂತಹ ನೀರಾಜನದ ಕಾಂತಿಗೆ ಸಮಾನವಾಗಿರುವ ತನ್ನ ಚರಣನಖಗಳ ಪ್ರಕಾಶದಿಂದ ಶ್ರೀ ಮಹಾಗಣಪತಿಯು ಶೋಭಿಸುತ್ತಿದ್ದಾನೆ. ಗಜವದನನಾದ ಇಂತಹ ಮಹಾಗಣಪತಿಯು ಪ್ರಸನ್ನದೃಷ್ಟಿಯಿಂದ ಅನುಗ್ರಹಿಸಿ ನನಗೆ ರಮಣೀಯವೂ ಶಾಶ್ವತವೂ ಆದ ಶ್ರೇಯಸ್ಸನ್ನು ನೀಡಲಿ. [15]

ಏತೇನ ಪ್ರಕಟರಹಸ್ಯಮಂತ್ರಮಾಲಾ-
ಗರ್ಭೇಣ ಸ್ಫುಟತರಸಂವಿದಾ ಸ್ತವೇನ ।
ಯಃ ಸ್ತೌತಿ ಪ್ರಚುರತರಂ ಮಹಾಗಣೇಶಂ
ತಸ್ಯೇಯಂ ಭವತಿ ವಶಂವದಾ ತ್ರಿಲೋಕೀ ॥೧೬॥

(ಪ್ರಕಟ...ಗರ್ಭೇಣ) ಸುಸ್ಪಷ್ಟವಾಗಿರುವ ಗುಪ್ತಮಂತ್ರಮಾಲೆಯನ್ನು ಒಳಗೊಂಡಿರುವ (ಸ್ಫುಟತರಸಂವಿದಾ) ಸ್ಪಷ್ಟವಾದ ಜ್ಞಾನಪ್ರಕಾಶವುಳ್ಳ (ಏತೇನ) ಈ (ಸ್ತವೇನ) ಸ್ತೋತ್ರದಿಂದ (ಯಃ) ಯಾವನು (ಮಹಾಗಣೇಶಂ) ಮಹಾಗಣಪತಿಯನ್ನು (ಪ್ರಚುರತರಂ) ಮತ್ತೆ ಮತ್ತೆ (ಸ್ತೌತಿ) ಸ್ತೋತ್ರ ಮಾಡುತ್ತಾನೆಯೋ (ತಸ್ಯ) ಅವನಿಗೆ (ಇಯಮ್) ಈ (ತ್ರಿಲೋಕೀ) ಮೂರುಲೋಕವೂ (ವಶಂವದಾ) ಅಧೀನವಾಗಿ (ಭವತಿ) ಆಗುತ್ತದೆ.

**ತಾತ್ಪರ್ಯ :** ಮಹಾಗಣಪತಿಯ ರಹಸ್ಯ ಮಂತ್ರಮಾಲೆಯನ್ನು ಒಳಗೊಂಡು ಈ ಸ್ತೋತ್ರವು ಪ್ರಕಟಿತವಾಗಿದೆ. ಈ ಸ್ತೋತ್ರದಲ್ಲಿ ಪ್ರಸಾದಗುಣವು ತುಂಬಿದೆ. ಈ ಸ್ತೋತ್ರವನ್ನು ಅನುಸಂಧಾನ ಮಾಡುವುದರಿಂದ ಜ್ಞಾನಪ್ರಬೋಧವುಂಟಾಗುತ್ತದೆ. ಈ ಸ್ತೋತ್ರದಿಂದ ಮಹಾಗಣಪತಿಯನ್ನು ಮತ್ತೆ ಮತ್ತೆ ಸ್ತುತಿಸುವವರಿಗೆ ಮೂರು ಲೋಕವೂ ವಶವಾಗುತ್ತದೆ. [16]

ಇತಿ ಶ್ರೀರಾಘವಚೈತನ್ಯವಿರಚಿತಂ ಮಹಾಗಣಪತಿಸ್ತೋತ್ರಂ
ಸಮಾಪ್ತಮ್



ದಂತಾವಲಾಸ್ಯೋ ದಶಬಾಹುಯುಕ್ತಃ
ದಯಾಧುರೀಣೋ ಧೃತರತ್ನಕುಂಭಃ ।
ದರಸ್ಮಿತೋ ದಾನರಸೇಣಯುಕ್ತಃ
ದೇಯಾತ್ಸದಾ ಶಾಶ್ವತ ದಿವ್ಯಸೌಖ್ಯಮ್ ॥

–ಟಿ. ಬಿ. ಲಕ್ಷ್ಮಣರಾವ್